ಲೆ

ಯ

ಎಸ್.

ನಾಲಯ

ರು

*ಶ್ರೀಯುತರಾದ*

ಹಾ. ಮಾ. ನಾಯಕ

ಎಚ್. ನರಸಿಂಹಯ್ಯ

ಜಿ. ನಾರಾಯಣ

ಎಲ್. ಎಸ್. ಶೇಷಗಿರಿರಾವ್

ಶಾಂತರಸ

ಕೆ. ವಿ. ಸುಬ್ಬಣ್ಣ

ಗೊ. ರು. ಚನ್ನಬಸಪ್ಪ

ಟಿ. ಎಸ್. ಶಂಕರ್

ಶಿವಶಂಕರ ಹಿರೇಮಠ

ಆರ್. ಎಸ್. ರಾಜಾರಾಮ್

ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*

ಎಸ್. ಜಿ. ನಾಗಲೋಟಿಮಠ

ಕೆ. ವಿ. ನಾರಾಯಣ

ಪುರುಷೋತ್ತಮ ಬಿಳಿಮಲೆ

ಕರೀಗೌಡ ಬೀಚನಹಳ್ಳಿ

ಅಮೃತ ಸೋಮೇಶ್ವರ

ಸಿ. ಆರ್. ಚಂದ್ರಶೇಖರ್

ಬಿ. ಎ. ಶ್ರೀಧರ

ಲಿಂಗದೇವರು ಹಳೆಮನೆ

ಭ. ಮಲ್ಲಿಕಾರ್ಜುನ

ಮಹಾಬಲೇಶ್ವರರಾವ್

ಭಕ್ತಪ್ರಿಯ

ಎಂ. ಪಿ. ಪರಮಶೇಖರಯ್ಯ

ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ-೬

# ಕಡಲು

ಎಚ್. ನಾಗವೇಣಿ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

KADALU : by H. Nagaveni, Published by The Director of Prasaranga,
Kannada University, Hampi - 583 211. KARNATAKA.
First Impression 1994, Pp. ii + 26, Rs. 8.00

---



**ಸಂಯೋಜನಾಧಿಕಾರಿ**
ಎಚ್.ಎಸ್. ಶ್ರೀಮತಿ
ಪಾಠ್ಯಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

ಮುಖಪುಟ ವಿನ್ಯಾಸ:
ಕೆ. ಮಕಾಳಿ

**ಬೆಲೆ : ರೂ. ೮**

**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102




# ಕಡಲು

ಅದು ಮಳೆಗಾಲ. ಮುಂಜಾನೆಯ ಸಮಯ. ಕಡಲು ಇಳಿಯುವ ಹೊತ್ತು. ತನಿಯ ಮನೆ ಬಾಗಿಲಲ್ಲಿ ಕೂತು ಗಂಜಿ ಉಣ್ಣುತ್ತಿದ್ದ. ಆತನಿಗೆ ಬಹಳ ಅವಸರ. ಆತ ಕಡಲಿಗೆ ಇಳಿಯುವ ಹೊತ್ತು ಮೀರಿತ್ತು. ತನಿಯ ಗಂಜಿ ತಟ್ಟೆ ಹಿಡಿದೇ ಮನೆ ಮುಂದಿದ್ದ ಕಡಲನ್ನು ದಿಟ್ಟಿಸುತ್ತಿದ್ದ. ಬಿಳಿಯ ಕಡಲು ಕಾಗೆಗಳು ಕಡಲ ದಡದಲ್ಲಿ ಹಾರಾಡುತ್ತಿದ್ದವು. ಅಲೆ ಅಲೆಯಾಗಿ ಸಾಗಿ ಬರುವ ಕಡಲ ತೆರೆಗಳಲ್ಲಿ ಅವು ಮೀನುಗಳಿಗಾಗಿ ಹುಡುಕಾಟ ನಡೆಸಿದ್ದವು. ತೆರೆಗಳು ಕಡಲ ದಂಡೆಗೆ ಬಿಳಿನೊರೆಯನ್ನು ಅಂಟಿಸಿ ಮರಳುತ್ತಿದ್ದವು; ಕಡಲ ಕಾಗೆಗಳು ಆ ತೆರೆಗಳ ಬೆನ್ನು ಹತ್ತುತ್ತಿದ್ದವು.

ತನಿಯ ಗಂಜಿ ಉಂಡು ಎದ್ದು ಕಡಲತ್ತ ಹೊರಟ. ಕಡಲು ಆತನಿಗೆ ಅನ್ನಕೊಡುವ ಬಟ್ಟಲು. ಕಡಲ ಒಡಲಲ್ಲಿರುವ ಮೀನು ಮಾರಿ ಬದುಕುವವ ತನಿಯ. ಇವತ್ತು ಕಡಲು ಶಾಂತವಾಗಿತ್ತು. ಕಡಲು ಶಾಂತವಾಗಿದ್ದರೆ ತನಿಯನಿಗೆ ದುಡಿಮೆ; ಇಲ್ಲದಿದ್ದರೆ ಇಲ್ಲ. ಕಡಲು ಅಬ್ಬರಿಸಿದರೆ ತನಿಯನಿಗೆ ಉಪವಾಸ. ಆವತ್ತು ತನಿಯನ ದೋಣಿ ಕಡಲಿಗೆ ಇಳಿಯುವುದಿಲ್ಲ. ಇದು ತನಿಯನನೊಬ್ಬನ ಸಮಸ್ಯೆಯಲ್ಲ. ಕಡಲನ್ನು ನಂಬಿ ಬದುಕುವ ಎಲ್ಲರದ್ದೂ ಸಮಸ್ಯೆ. ಇತ್ತೀಚೆಗೆ ತನಿಯ ಬಹಳ ಬುದ್ಧಿವಂತನಾಗಿದ್ದಾನೆ. ಕಡಲು ಶಾಂತವಾಗಿರುವಾಗ ದಿನವಿಡೀ ಬೆವರುಸುರಿಸಿ

ಕಡಲನ್ನು ಜಾಲಾಡುತ್ತಾನೆ. ಬಲೆಬೀಸಿ ದೋಣಿ ತುಂಬಾ ಮೀನು ತರುತ್ತಾನೆ. ಆ ಮೀನುಗಳನ್ನ ತೊಳೆದು ಉಪ್ಪು ನೀರಲ್ಲಿ ಅದ್ದಿ ಬಿಸಿಲಲ್ಲಿ ಒಣಗಿಸುತ್ತಾನೆ. ಈಗ ಕಡಲ ಅಬ್ಬರದ ಹೊತ್ತಿಗೆ ಆತ ಉಪವಾಸ ಬೀಳುವುದು ತಪ್ಪಿದೆ. ತನಿಯನ ಈ ಬುದ್ಧಿವಂತಿಕೆಯನ್ನು ಇತರ ಬೆಸ್ತರೂ ಅನುಕರಿಸಿದ್ದಾರೆ.

ಇದೀಗ ತನಿಯ ಕಡಲ ದಡದಲ್ಲಿ ನಿಂತಿದ್ದ. ಕಡಲ ದಂಡೆಯಲ್ಲಿ ಹಲವು ಸೋಗೆ ಮುಚ್ಚಿದ ಚಪ್ಪರಗಳಿವೆ. ಆ ಚಪ್ಪರಗಳ ಒಳಗೆ ಬೆಸ್ತರ ದೋಣಿಗಳಿವೆ; ಬಲೆಗಳಿವೆ. ಕಡಲಿನ ಅಬ್ಬರದ ಸಮಯಕ್ಕೆ ಅದನ್ನು ಬಿಸಿಲ ಹೊಡೆತಕ್ಕೆ ಸಿಲುಕಿಸದೆ ಚಪ್ಪರದ ಒಳಗೆ ದೂಡಿಬಿಡುತ್ತಾರೆ. ದೋಣಿ, ಬಲೆಗಳು ಬಾಳಿಕೆ ಬಂದರೆ ಬೆಸ್ತರ ದುಡಿಮೆಯೂ ಬಾಳಿಕೆ ಬಂದಂತೆ.

ತನಿಯ ಕಡಲದಂಡೆಯ ಮೇಲೆ ನಿಂತು ಗೆಳೆಯ ಕರಿಯನಿಗಾಗಿ ಕಾಯುತ್ತಿದ್ದ. ಆತ ಅವಸರ ಪಟ್ಟಿದ್ದೇ ಬಂತು. ಕರಿಯನಿನ್ನೂ ಕಡಲ ದಡಕ್ಕೆ ಬಂದಿರಲಿಲ್ಲ. ತನಿಯನ ದೋಣಿಯಲ್ಲಿ ಆವತ್ತು ಕರಿಯನೂ ಬರುವವನಿದ್ದ. ಮೊನ್ನೆಯಿಂದ ಕರಿಯನ ಹೊಟ್ಟೆಗೆ ತನಿಯನ ದೋಣಿಯೇ ಗತಿ. ಕರಿಯನ ದೋಣಿ ಮೊನ್ನೆ ಅಳಿವೆ ಬಾಗಿಲಲ್ಲಿ ಮರಳ ದಿನ್ನೆಗೆ ಡಿಕ್ಕಿ ಹೊಡೆದಿತ್ತು. ದೋಣಿ ಚೂರು ಚೂರಾಗಿತ್ತು. ನದಿ ಕಡಲಿಗೆ ಸೇರುವ ಜಾಗವೇ ಅಳಿವೆ. ನದಿ ಕಡಲು ಸೇರುವ ತವಕದಲ್ಲಿ ಮಣ್ಣು ಕೆಸರು ಮರಳನ್ನು ಎಳೆದು ತಂದು ಅಳಿವೆಯಲ್ಲಿ ದಿನ್ನೆ ಎಬ್ಬಿಸಿತ್ತು. ನೀರಡಿ ಇದ್ದ ಆ ದಿನ್ನೆ ಕರಿಯನಿಗೆ ಹೇಗೆ ಕಾಣಿಸೀತು? ಕರಿಯನ ದೋಣಿ ನೀರೊಳಗಿದ್ದ ಮರಳದಿನ್ನೆಗೆ ಬಡಿದು ಬಿಟ್ಟಿತ್ತು. ಕರಿಯನ ಜೀವ ಉಳಿದಿದ್ದೇ ಹೆಚ್ಚು. ದೋಣಿಯ ಜತೆ ಕರಿಯನ ದುಡಿಮೆಯೂ ಚೂರಾಗಿತ್ತು. ಆಗ ಆತನಿಗೆ ಸಹಾಯ ನೀಡಿದವ ಗೆಳೆಯ ತನಿಯ.

ತನಿಯ ಕಡಲ ತೀರದಲ್ಲಿ ನಿಂತು ದೂರದ ಅಳಿವೆಯತ್ತ ನೋಡುತ್ತಿದ್ದ. ಸರಕಾರ ಅಳಿವೆಯ ಬಾಗಿಲ ಹೂಳೆತ್ತದಿದ್ದರೆ, ನಾಳೆ ಬಡಬೆಸ್ತರ ಬದುಕು ಗೋಳಾಗುತ್ತದೆ ಎಂದು ಚಿಂತಿಸುತ್ತಿದ್ದ. ತನಿಯನ ಚಿಂತೆ ಸರಕಾರಕ್ಕೆಲ್ಲಿ ನಾಟುತ್ತದೆ. ವರ್ಷವೂ ಅಳಿವೆ ಮುಖದಲ್ಲಿ ದಿನ್ನೆಗೆ

ದೋಣಿ ಬಡಿಯುತ್ತಲೇ ಇದೆ. ಸಾವು ನೋವಿನ ಸುದ್ದಿಗಳು ಬರುತ್ತಲೇ ಇವೆ. ಸಾವು-ನೋವಿನ ಸುದ್ದಿ ಬರುತ್ತಲೇ ಸರಕಾರಕ್ಕೆ ಎಚ್ಚರವಾಗುತ್ತದೆ. ಅಲ್ಲಿಂದ ಹೂಳೆತ್ತುವ ಯಂತ್ರ ತರಿಸುತ್ತೇವೆ. ಇಲ್ಲಿಂದ ಹೂಳೆಬ್ಬಿಸುತ್ತೇವೆ- ಎಂದು ಬೆಸ್ತರನ್ನು ನಂಬಿಸುತ್ತದೆ. ಆದಿನ ಬರುವುದೇ ಇಲ್ಲ. ಲಕ್ಷಗಟ್ಟಲೆ ಹಣ ಸುರಿದು ಮಾಡಬೇಕಾದ ಕೆಲಸ ಇದು. ಸರಕಾರವನ್ನು ಅವಲಂಬಿಸಲೇ ಬೇಕು. ತಾವೇ ಒಗ್ಗೂಡಿ ಹೂಳೆಬ್ಬಿಸುವಂತಿಲ್ಲ.

ತನಿಯ ಹೀಗೆ ಅಳಿವೆ ಬಾಗಿಲ ಚಿಂತೆಯಲ್ಲಿದ್ದ. ಅಷ್ಟರಲ್ಲಿ ಕರಿಯನ ಹೆಂಡತಿ ಕಮಲು ದೂರದಲ್ಲಿ ಬರುತ್ತಿರುವುದು ಕಾಣಿಸಿತು. ಸೊಂಪಾಗಿ ಬೆಳೆದ ಗಾಳಿ ಮರಗಳ ನಡುವೆ. ತನಿಯ, ಕರಿಯನ ಬಗ್ಗೆ ವಿಚಾರಿಸಲು ಆಕೆಯತ್ತ ನಡೆದ. ಕಮಲುವಿನ ಎಡಕೈಯಲ್ಲಿ ಮೀನ ಬುಟ್ಟಿಯಿತ್ತು. ಮುಖದ ತುಂಬಾ ನೋವಿತ್ತು. ಕಣ್ಣಲ್ಲಿ ನೀರಿತ್ತು. ತನಿಯನಿಗೆ ಕಮಲುವಿನ ಮುಖ ನೋಡಿ ಗಾಬರಿ. ಕಮಲುವನ್ನು ವಿಚಾರಿಸಿದ. ಆಕೆ ಗೊಳೋ ಎಂದು ಅತ್ತೇಬಿಟ್ಟಳು.

ಆಕೆಯ ತಾಯಿಯ ಮನೆ ನಿನ್ನೆ ಕಡಲು ಪಾಲಾಯಿತಂತೆ! ಕಡಲ ಕೊರೆತಕ್ಕೆ ಸಿಲುಕಿ ಮನೆ ಕಡಲು ಪಾಲಾದ ಸುದ್ದಿ ತನಿಯನಿಗೂ ಅಳು ಬರಿಸಿತ್ತು. ಆತ ಮನದಲ್ಲೇ ಅತ್ತ. ಕಡಲಿಗಷ್ಟು ಕರುಣೆಯಿಲ್ಲವೆ - ಎಂದು ಕಡಲನ್ನು ಶಪಿಸಿದ. ಆದರೆ ಕಡಲದ್ದೇನು ತಪ್ಪಿಲ್ಲ ಎಂಬುದು ಅವನಿಗೂ ಗೊತ್ತು.

## ಕಡಲ ಕೊರೆತ

ಮಳೆಗಾಲದಲ್ಲಿ ಕಡಲು ದೊಡ್ಡದು. ಅಲ್ಲಿಂದ . . ಇಲ್ಲಿಂದ ತುಂಬಿ ಹರಿದು ಬರುವ ನದಿ, ತೋಡು, ಹಳ್ಳಗಳನ್ನು ತನ್ನೊಳಗೆ ಬಾಚಿಕೊಳ್ಳಲೂ ಕಡಲಿಗೆ ಆಗ ಸಮಯವಿಲ್ಲ.

ಅಷ್ಟಷ್ಟು ಎತ್ತರಕ್ಕೆ ತೆರೆ ಹಾರಿಸುತ್ತಾ ಇಡೀ ಕಡಲದಂಡೆಯನ್ನು ತನ್ನ ವಶದಲ್ಲಿರಿಸಿಕೊಳ್ಳುತ್ತದೆ. ತನಗಿಷ್ಟ ಬಂದಂತೆ ಕಡಲದಂಡೆ ಇಡೀ ಅಬ್ಬರಿಸುತ್ತಾ ತನ್ನ ರುದ್ರ

ರೂಪವನ್ನು ತೋರಿಸುತ್ತಿರುತ್ತದೆ. ಈ ಕಾಲದಲ್ಲಿ ಕಡಲ ಮೇಲಿಂದ ಗಾಳಿ ಬೀಸುವುದು ಸಾಮಾನ್ಯ. ಈ ಗಾಳಿಯೆಂದರೆ ಸಾಮಾನ್ಯದ್ದಲ್ಲ. ಕಡಲನ್ನು ಉಗ್ರವಾಗಿ ತುಳುಕಾಡಿಸುವಂತಾದ್ದು. ಆಳೆತ್ತರದ ತೆರೆಗಳನ್ನು ಹುಟ್ಟಿಸುವಂತಾದ್ದು. ಆಗ ಸಿಡುಕನ ಕೈಗೆ ಸಟ್ಟುಗ ಕೊಟ್ಟಂತಾಗುತ್ತದೆ ಮಳೆಗಾಲದಲ್ಲಿ ಅಬ್ಬರದ ಕಡಲು ಮತ್ತೂ ಆರ್ಭಟಿಸತೊಡಗುತ್ತದೆ. ದೊಡ್ಡ ದೊಡ್ಡ ತೆರೆಗಳು ಏರಿಬಂದು ಕಡಲ ದಂಡೆಯ ಮಿದು ಮಣ್ಣನ್ನು ಕೊರೆದು ಕೊಚ್ಚತೊಡಗುತ್ತವೆ. ಹಾಗೇ ಮುಂದು ಮುಂದಕ್ಕೆ ತೆವಳುತ್ತಾ ಕಡಲ ದಂಡೆಯನ್ನಿಡೀ ಕಬಳಿಸಿ ಮುಂದಿರುವ ತೋಟಕ್ಕೆ ತೆವಳುತ್ತದೆ. ಅದನ್ನೂ ಕಬಳಿಸಿ ಮತ್ತೂ ಮುನ್ನುಗ್ಗುತ್ತದೆ. ತನ್ನ ದಂಡೆಯಲ್ಲಿ ಮನೆ-ಮಠ ಮಾಡಿಕೊಳ್ಳುವುದಕ್ಕೆ ಕಡಲೆಂದೂ ಬಿಡದು. ಮಳೆಗಾಲದಲ್ಲಿ ಉಬ್ಬುವುದಕ್ಕೆ, ಹಿಗ್ಗುವುದಕ್ಕೆ ಅಬ್ಬರಿಸುವುದಕ್ಕೆ ಅದಕ್ಕೆ ದಂಡೆಯೂ ಬೇಕು. ದಂಡೆಗೆ ತಾಕಿರುವ ಮಿದುಮಣ್ಣ ಜಾಗೆಯೂ ಬೇಕು. ಅದೆಲ್ಲಾ ಗೊತ್ತಿದ್ದೂ, ಕಡಲ ಮನಸ್ಸು ತಿಳಿದಿದ್ದೂ, ದಂಡೆಯ ಪಕ್ಕದಲ್ಲೇ ಮನೆ ತೋಟ ಮಾಡಿಕೊಂಡರೆ. ಕಡಲು ಅದನ್ನ ಒಡಲ ಒಳಗೆ ಜಾರಿಸಿಕೊಳ್ಳದೆ ಮತ್ತೇನು ಮಾಡುತ್ತದೆ ?

ಹೀಗೆ ತನಿಯ ಯೋಚಿಸುತ್ತಿರಬೇಕಾದರೆ ಆತನಿಗೆ ನೆನಪಿಗೆ ಬಂದಿದ್ದು ಬೆಂಗರೆ ಊರು. ಬೆಂಗರೆಯಲ್ಲಿ ಹೀಗೆಯೇ ಪ್ರತೀ ವರ್ಷ ಕಡಲ ಕೊರೆತದ ದೂರು. ಸರಕಾರಕ್ಕೆ ಆ ದೂರು ರವಾನೆ. ಪ್ರತಿಬಾರಿಯೂ ಸರಕಾರ ಮೌನ. ಕಳೆದ ಬಾರಿಯಂತೂ ಸರಕಾರದ ಮೌನಕ್ಕೆ ಬೆಸ್ತರ ಪ್ರತಿಭಟನೆ ; ಬೆಸ್ತರ ಸಿಟ್ಟು, ಸಿಟ್ಟಿನ ಹಿಂದಿದ್ದ ಅಳಲು ಸರಕಾರಕ್ಕೆ ಕೇಳಿಸಿತು. ಅದು ತಟ್ಟನೆ ಚುರುಕಾಯಿತು.ಕಡಲ ದಂಡೆಗೆ ಬಂಡೆಕಲ್ಲು ಬೀಳಿಸಿತು. ಕಟ್ಟಿಸಿತು ಕಡಲಿಗೆ ತಡೆಗೋಡೆ. ಬೆಂಗರೆಯ ಬೆಸ್ತರು ಸರಕಾರಕ್ಕೆ ಋಣಿಯಾದರು.

ತನಿಯ ಬೆಂಗರೆಯ ಕಡಲು ಕೊರೆತದ ಬಗ್ಗೆ ಯೋಚಿಸುತ್ತಿದ್ದಾಗ ಕಮಲು ಕಡಲದಂಡೆಯಲ್ಲಿ ಕೂತುಬಿಟ್ಟಿದ್ದಳು. ಕರಿಯ, ಕಮಲುವಿನ ತಾಯಿಮನೆಗೆ ಮುಂಜಾನೆಯೇ ಹೋಗಿದ್ದನಂತೆ. 'ಕಡಲಿಗೆ ಬರುವುದಿಲ್ಲ. ತನಿಯನಿಗೆ ಹೇಳು'- ಎಂದು ಕಮಲುವಿನಲ್ಲಿ ಹೇಳಿ ಕಳುಹಿಸಿದ್ದ. ಅದನ್ನು ತನಿಯನಿಗೆ ಹೇಳಬೇಕೆ ನ್ನುವಷ್ಟರಲ್ಲಿ ತನಿಯನೇ ಕರಿಯನ ಬಗ್ಗೆ ಕೇಳಿದ್ದ.

ಕರಿಯ ತನ್ನ ಅತ್ತೆ ಮನೆ ಕಡಲು ಪಾಲಾಯಿತೆಂದು ಕೇಳಿ ಅತ್ತೇ ಬಿಟ್ಟಿದ್ದನಂತೆ. ಹಾಗೆಂದು ಕಮಲು ತನಿಯನಲ್ಲಿ ಕಣ್ಣೀರು ಜಿನುಗಿಸುತ್ತಾ ಹೇಳಿದಾಗ ತನಿಯನಿಗೂ ಅಳು ಬಂದಿತ್ತು. ಕಮಲುವಿನ ತಾಯಿ ಮನೆ, ಕರಿಯನಿಗೂ ತಾಯಿ ಮನೆ ಇದ್ದ ಹಾಗೆ. ಬೆಸ್ತರಲ್ಲಿ ಹಾಗೆ. ಅಳಿಯಕಟ್ಟು ಸಂತಾನ. ಮಗಳೇ ತಾಯಿ ಮನೆಯ ಒಡತಿ ಮಗನಲ್ಲ. ಹೆಂಡತಿಗೆ ಒಡೆತನವಿರುವ ಅತ್ತೆ ಮನೆಯೇ ಗಂಡನ ಮನೆ ಕೂಡಾ. ಅದಕ್ಕೇ ಕರಿಯನಿಗೆ ಅತ್ತೆ ಮನೆ ಕಡಲ ಪಾಲಾದ ಸುದ್ದಿ ಕೇಳಿ ಒಡಲು ಉಬ್ಬರಿಸಿ ಬಂದಿತ್ತು. ಆತ ಆ ಮನೆಯಲ್ಲಿ ಎಷ್ಟು ವರ್ಷ ಬದುಕಿರಲಿಲ್ಲ? ಆ ತೋಟ, ಆ ಮನೆ ಅವನಿಗೆ ಎಷ್ಟು ಪರಿಚಿತವಲ್ಲ. ಇದೀಗ ಅವೆಲ್ಲವೂ ಕಡಲ ಒಡಲಿಗೆ ಸೇರಿದಾಗ ಆತನಿಗೆ ದುಃಖವಾಗದೆ ಇದ್ದೀತೆ ?

ಬಿಸಿಲು ಬಲಿಯುತ್ತಿತ್ತು. ಮಳೆಗಾಲ ಎಂದು ಯಾರೂ ಹೇಳಲಾಗದಷ್ಟು ಸಮುದ್ರ ಶಾಂತವಾಗಿತ್ತು. ತನಿಯನ ಮನೆ ಮುಂದಿದ್ದ ಕಡಲು ಶಾಂತವಾಗಿದೆ ಎಂದರೆ, ಎಲ್ಲಾ ಕಡೆಯಲ್ಲೂ ಶಾಂತವಾಗಿರಬೇಕೆಂದಿಲ್ಲ. ಹಾಗೇ ಇದ್ದಿದ್ದರೆ ಕಮಲುವಿನ ತಾಯಿಮನೆಯನ್ನು ಕಡಲು ರಂಪಾಟ ಮಾಡಿ ಕೊರೆದು ಹಾಕುತ್ತಿರಲಿಲ್ಲ. ಆಯಾ ಊರಿನ ಗಾಳಿ, ಮಳೆ, ನೆಲ, ಹವೆಯನ್ನು ಅವಲಂಬಿಸಿ ಕಡಲಿನ ಚಲನವಲನವಿರುತ್ತದೆ.

ತನಿಯ ತಾನು ಒಬ್ಬನೇ ಮೀನ ಬೇಟೆಗೆ ಕಡಲಿಗಿಳಿಯಲು ನಿರ್ಧರಿಸಿದ್ದ. ಕಡಲ ದಂಡೆಯಲ್ಲಿದ್ದ ಸೋಗೆಯ ಚಪ್ಪರದಿಂದ ದೋಣಿ-ಬಲೆ-ಹುಟ್ಟನ್ನೆಳೆದು ನೀರಿಗಿಳಿಸಬೇಕವ. ಅದು ಸುಲಭದ ಕೆಲಸವಲ್ಲ. ಇನ್ನೊಬ್ಬ ಗಟ್ಟಿಮುಟ್ಟಾದವ ಸಹಕರಿಸಬೇಕು. ಕೈಯಲ್ಲಿ ಹುಟ್ಟು ಹಿಡಿದು ತನಿಯ ಸಹಾಯಕ್ಕಾಗಿ ಎದುರು ನೋಡಿದ. ದೂರದಲ್ಲಿ ಕಡಲಿಗೆ ಪಡವು ಇಳಿಯುವುದು ಕಾಣಿಸುತ್ತಿತ್ತು. ಆ ಪಡವಿನ ಅಕ್ಕಪಕ್ಕ ಸುಮಾರು ನೂರು ಮಂದಿ ಬೆಸ್ತರು ನಿಂತಿದ್ದರು. ಅವರೆಲ್ಲಾ ತಲೆಗೊಂದು ಟೋಪಿ ಹಾಕಿ ಬಿಸಿಲಿಗೆ ತಲೆಯೊಡ್ಡಿದ್ದಾರೆ. ಆ ಪಡವಿನ ಮುಂದೆ ತನಿಯನ ದೋಣಿ ಆನೆಯ ಮುಂದೆ ನಿಂತ ಆಡಿನ ಹಾಗಿತ್ತು. ತನಿಯನ ದೋಣಿಗಿಂತ ಸುಮಾರು ನಲವತ್ತು ಪಟ್ಟು ದೊಡ್ಡ ದೋಣಿಯೇ ಪಡವು.

ತನಿಯ ಸಹಾಯಕ್ಕಾಗಿಪಡವಿನ ಬೆಸ್ತರನ್ನು ಕೂಗುವ ಹಾಗಿಲ್ಲ. ಅವರು ಭಾರೀ ರಂಪಣಿ ಬಲೆ ಹಾಕಲು ಹೊರಟವರು. ಪಡವು ನೀರಿಗಿಳಿಯುತ್ತಿತ್ತು. ಮೈಲು ಉದ್ದದ ರಂಪಣಿ ಬಲೆ ಅದರೊಳಗಿತ್ತು. ಅಷ್ಟೊಂದು ಉದ್ದದ ರಂಪಣಿ ಬಲೆಯನ್ನು ಕಡಲಲ್ಲಿ ಬೀಸಿ ಹರಡುವುದೇ ಜಾಣ್ಮೆಯ ಕೆಲಸ. ತನಿಯನ ಸಹಾಯಕ್ಕೆ ಯಾರೂ ಬರುವ ಹಾಗೆ ಕಾಣಿಸದು. ಅವರ ಮನಸ್ಸೆಲ್ಲಾ ಪಡವನ್ನು ನೀರಿಗಿಳಿಸುವುದರಲ್ಲೆ ಇತ್ತು. ತನಿಯನ ಸಂಕಟ ನೋಡಿ ಕಮಲುವೇ ಎದ್ದು ನಿಂತಳು. ದೋಣಿಯನ್ನು ಕಡಲಿಗೆ ಇಳಿಸುವುದಕ್ಕೆ. ಮೈ ಮುರಿದು ದುಡಿಯುವ ಬೆಸ್ತರ ಹೆಣ್ಣು, ಬಲದಲ್ಲಿ ಗಂಡಾಳಿಗಿಂತ ಕಡಿಮೆಯೇನಲ್ಲ. ತನಿಯನ ದೋಣಿ ಕಡಲಿಗಿಳಿಯಿತು. ತೆರೆಗಳನ್ನು ಸೀಳುತ್ತಾ ಕುಪ್ಪಳಿಸುತ್ತಾ ಮುಂದುವರಿಯಿತು.

ಕಮಲು ನಿಟ್ಟುಸಿರು ಬಿಡುತ್ತಾ ಕಡಲ ಕರೆಯಿಂದ ಮೇಲೆ ಬಂದಳು. ದಡದಲ್ಲಿದ್ದ ಬುಟ್ಟಿ ಎತ್ತಿಕೊಂಡಳು. ಆ ಬುಟ್ಟಿಗೆ ಪಡ್ಡೆನಾಯಿಯೊಂದು ಮುಖ ಹಾಕುತ್ತಿತ್ತು. ಬುಟ್ಟಿಯಲ್ಲಿದ್ದ ಅರೆ ಒಣಗಿದ ಬಂಗುಡೆ ಮೀನನ್ನ ಆಕೆ ಒಣ ಹಾಕಬೇಕಿತ್ತು. ನಾಕು ಮಾರು ಮುಂದೆ ನಡೆದಳು. ಬಿಸಿಲು ಚೆನ್ನಾಗಿ ಬಲಿತಿತ್ತು. ಆ ಬಿಸಿಲು ಮೀನು ಒಣಗುವುದಕ್ಕೆ ಹೇಳಿ ಮಾಡಿಸಿದಂತಿತ್ತು. ಇತ್ತ ಆಕೆ ಮೀನು ಒಣಹಾಕುತ್ತಿದ್ದಂತೆ, ಅತ್ತ ಪಡವು ನೀರಿಗಿಳಿಯಿತು. ಪಡವನ್ನು ನೀರಿಗಿಳಿಸುವುದೇ ಒಂದು ಸಾಹಸ.

ಪಡವಿಗೆ ಕಡಲ ನಡುವಿನಿಂದ ಕೆಂಪು ನಿಶಾನೆ ಬಂದಿತ್ತು. 'ಇಲ್ಲಿ ಮೀನ ತೆಪ್ಪಗಳಿವೆ' ಎಂಬುದೇ ಆ ನಿಶಾನೆ. ಮೀನ ತೆಪ್ಪಗಳನ್ನು ಪತ್ತೆ ಹಚ್ಚುವುದಕ್ಕೆ ಆಗಲೇ ಆ ಪಡವಿನ ಬಳಗಕ್ಕೆ ಸಂಬಂಧಿಸಿದ ಎರಡು ಪುಟ್ಟ ದೋಣಿಗಳು ಕಡಲಿಗೆ ಇಳಿದಿದ್ದವು. ಅವು ಮೀನ ತೆಪ್ಪಗಳನ್ನು ಪತ್ತೆ ಹಚ್ಚಿದ್ದವು. ಕಮಲು ಮೀನು ಒಣಗಿಸುತ್ತಿದ್ದವಳು, ಒಂದು ಗಳಿಗೆ ತಲೆ ಎತ್ತಿ ಕಡಲು ನೋಡಿದಳು. ಈಗ ತನಿಯನ ದೋಣಿಯನ್ನು ಪತ್ತೆ ಹಚ್ಚುವುದು ಆಕೆಗೆ ಕಷ್ಟ. ಕಡಲಲ್ಲಿ ನೂರಾರು ಚಿಕ್ಕ ಪುಟ್ಟ ದೋಣಿಗಳಿದ್ದವು;. ನಾಡದೋಣಿಗಳಿದ್ದವು;. ಪಡವುಗಳಿದ್ದವು;. ರಭಸದಿಂದ ಸಾಗಬಲ್ಲ ಯಂತ್ರವುಳ್ಳ ಟ್ರಾಲಿದೋಣಿಗಳಿದ್ದವು. ಪರ್ಸಿನ್ ದೋಣಿಗಳಿದ್ದವು. ಅವೆಲ್ಲಾ ಮೀನಿನ ತೆಪ್ಪಗಳನ್ನು

ಬಾಚ ಹೊರಟವು. ಇವೆಲ್ಲದರ ನಡುವೆ ಹೊರನಾಡಿಗೆ ಸರಕು ಸಾಗಿಸುವ ದೊಡ್ಡ ದೊಡ್ಡ ಹಡಗುಗಳೂ ಅಲ್ಲಿದ್ದವು. ಹಿಂದೆಲ್ಲಾ ಜನರನ್ನು ಪರವೂರಿಗೆ ಸಾಗಿಸುವ ಹಡಗುಗಳು ಕಡಲಿನಲ್ಲಿ ಇರುತ್ತಿದ್ದವು. ಈಗ ಕಮ್ಮಿ ಅಷ್ಟೆ.

ಕಮಲು ಮತ್ತೆ ಎವೆಯಿಕ್ಕದೆ ನೋಡಿದಳು. ಕಡಲ ಮೇಲಿನ ನೋಟವನ್ನು. ಕಡಲಿನ ಅಲೆಗಳು ಏರಿಬರುವ ಹಾಗೆ ಆಕೆಗೆ ಸಿಟ್ಟು ಏರಿ ಬಂತು. ಮೋಟಾರ್ ಜೋಡಿಸಿದ ಪರ್ಸಿನ್ ದೋಣಿ, ಟ್ರಾಲಿದೋಣಿಗಳೆಂದರೆ ಕಮಲುವಿಗೆ ಸಿಟ್ಟು ಆ ಯಂತ್ರದ ದೋಣಿಗಳು ಕಡಲಿಡೀ ಶಬ್ದ ಮಾಡುತ್ತವೆ. ಮೀನ ತೆಪ್ಪಗಳಿಗೆ ಕಿರಿ ಕಿರಿ ಮಾಡುತ್ತವೆ. ಇವುಗಳ ಅಬ್ಬರಕ್ಕೆ ಬೆದರಿ ಮೀನುಗಳು ದಿಕ್ಕಾಪಾಲಾಗುತ್ತವೆ. ಬಡ ಬೆಸ್ತರ ಸಣ್ಣ ಪುಟ್ಟ ದೋಣಿಗಳಿಗೆ, ಪಡವುಗಳಿಗೆ ಮೀನು ಸಿಗುವುದೇ ಇಲ್ಲ. ಸಿರಿವಂತರ ಯಂತ್ರದ ದೋಣಿಗಳು ಬಡಮೀನುಗಾರರ ಹೊಟ್ಟೆಗೆ ಹೊಡೆಯುತ್ತವೆ.

ಕಮಲುವಿನ ಸಿಟ್ಟಿಗೆ ಇದು ಒಂದೇ ಕಾರಣವಲ್ಲ. ಬೇರೆಯೂ ಇದೆ. ಬೆಸ್ತರಿಗೂ ಕಡಲಿಳಿದು ಮೀನ ಬೇಟೆ ಮಾಡುವುದಕ್ಕೆ ಹಲವು ರೀತಿ ರಿವಾಜುಗಳಿವೆ. ಆ ರೀತಿ ನಿಯಮಗಳನ್ನು ಮಾಡಿಕೊಂಡವರೂ ಅವರೇ. ಕಡಲ ಜೊತೆಯಲ್ಲಿ ಬದುಕುವವರು ಅವರು. ಕಡಲ ದಿನಚರಿ ಅವರಿಗೆ ತಿಳಿದಷ್ಟು ಬೇರಾರಿಗೂ ತಿಳಿದಿಲ್ಲ. ಮೀನು ಮೊಟ್ಟೆ ಇಡುವ ಕಾಲಕ್ಕೆ ಬೆಸ್ತರು ಕಡಲಿಗೆ ದೋಣಿ ಇಳಿಸುವಂತಿಲ್ಲ. ಯಾವ ಕಾಲದಲ್ಲಿ ಯಾವ ಮೀನು ಮೊಟ್ಟೆ ಇಡುತ್ತೆ, ಎನ್ನುವುದು ಬೆಸ್ತರಿಗೆ ಚೆನ್ನಾಗಿ ಗೊತ್ತು. ಆ ಕಾಲದಲ್ಲಿ ಆ ಮೀನು ಬೀಳುವಂತಾ ಬಲೆಯನ್ನು ಬಳಸುವಂತಿಲ್ಲ. ಮೀನಿನ ಸಂತತಿಯನ್ನು ಉಳಿಸುವುದೇ ಬೆಸ್ತರ ಉದ್ದೇಶ. ಮೀನಿನ ಸಂತತಿ ಉಳಿಸಿದರೆ ಬೆಸ್ತರ ದುಡಿತ ಉಳಿಸಿದಂತೆ. ಈ ನಿಯಮಕ್ಕೆ ಎಲ್ಲ ಬೆಸ್ತರು ತಲೆಬಾಗುತ್ತಾರೆ.

ಆದರೆ ಲಕ್ಷಗಟ್ಟಲೆ ಬೆಲೆ ಬಾಳುವ ಮೋಟಾರು ದೋಣಿಗಳು ಈ ನಿಯಮವನ್ನು ಪಾಲಿಸುವುದಿಲ್ಲ. ಅವು ಕಡಲನ್ನು ಪ್ರೀತಿಸುವುದಿಲ್ಲ. ಕಡಲ ಸುಖ ದುಃಖ ಅವಕ್ಕೆ ಬೇಕಿಲ್ಲ. ಬೇಕಿರುವುದು ಕಡಲ ಮೀನ ಸಂಪತ್ತು ಮಾತ್ರ. ಎಲ್ಲಾ ಕಾಲದಲ್ಲೂ ಕಡಲಿಗೆ ಮೀನ ಬೇಟೆಗೆ

ಹೊರಡುತ್ತವೆ. ಕಡಲನ್ನು ಬರಿದು ಮಾಡುತ್ತವೆ. ಮೊಟ್ಟೆ, ಮರಿ ಎಲ್ಲವನ್ನೂ ಬಾಚಿಕೊಳ್ಳುತ್ತವೆ. ಇದಕ್ಕೆ ಕಾರಣ ಈ ದೋಣಿಗಳು ಕಡಲನ್ನು ಪೂಜಿಸುವ ಬೆಸ್ತರ ಜನಾಂಗದ ಒಡೆತನದಲ್ಲಿ ಇಲ್ಲದಿರುವುದು. ಕಡಲ ಸಂಪತ್ತನ್ನು ದೋಚಬೇಕೆನ್ನುವ ಇರಾದೆಯುಳ್ಳ ಸಿರಿವಂತ ವ್ಯಾಪಾರಿಗಳ ದೋಣಿಗಳಿವು.

ಇತ್ತ ತೀರದಲ್ಲಿ ನಿಂತಿದ್ದ ಕಮಲುವಿಗೆ ಸಿಟ್ಟು ಏರಿತ್ತು. ಅತ್ತ ಕಡಲ ನಡುವಲ್ಲಿದ್ದ ತನಿಯನಿಗೂ ಸಿಟ್ಟು ಅಮರಿತ್ತು. ತನಿಯ ಕಡಲಿಗೆ ಬಲೆಯಿನ್ನೂ ಬೀಸಿಲ್ಲ. ಆತನಿಗೆ ಮೀನ ತೆಪ್ಪವೇ ಕಾಣಿಸುತ್ತಿಲ್ಲ. ಕಡಲ ನೀರ ಮೇಲೆ ಎಣ್ಣೆ ಪದರ ತೇಲುತ್ತಿದೆ. ನೀರಿಗೆ ಎಣ್ಣೆಯ ಲೇಪವಿದ್ದರೆ ನೀರೊಳಗಿನ ಮೀನು ಕಾಣಿಸೀತೆ? ಎಣ್ಣೆ ಮೆದ್ದ ಕಡಲಲ್ಲಿ ಮೀನು ಬದುಕಲುಂಟೆ ? ಎಣ್ಣೆ ಪದರದಿಂದಾಗಿ ಮೀನ ಸುಳಿವು ಕಾಣದಾದಾಗ ತನಿಯನ ಸಿಟ್ಟು ಎಲ್ಲೆ ಮೀರಿತ್ತು. ಬೆಂಗರೆಯ ಕಡಲತೀರದಲ್ಲಿ ಹಡಗು ಒಡೆಯುವ ಕೆಲಸ ಶುರುವಾಗಿತ್ತು. ಅಂದಿನಿಂದ ಎಣ್ಣೆಪದರ ಕಡಲನ್ನು ಬಾಚಿಕೊಂಡಿದೆ. ಕೆಲಸಕ್ಕೆ ಬಾರದ ಹಳೆಯ ಹಡಗನ್ನು ಒಡೆಯುವುದು ಲಾಭದ ಕೆಲಸ. ಸಿರಿವಂತರು ಅದರ ಗುತ್ತಿಗೆ ಪಡಿದಿದ್ದಾರೆ. ಹಡಗನ್ನು ಕಡಲ ಬದಿಯ ನೀರಿಗೆ ಎಳೆದು ತಂದು ಒಡೆಯುತ್ತಾರೆ. ಮುದಿಯಾದ ಹಡಗಲ್ಲಿ ಬುಟ್ಟಿಗಟ್ಟಲೆ ಎಣ್ಣೆ ಕೊಳೆ, ವಿಷವಸ್ತುಗಳು ಪಾಚಿಗಟ್ಟಿರುತ್ತದೆ. ಒಡೆಯಬೇಕಾದರೆ ಅವೆಲ್ಲಾ ಕಡಲಿಗೆ ಸೇರುತ್ತವೆ. ಕಡಲನ್ನು ಮಲಿನಗೊಳಿಸುತ್ತವೆ. ಕಡಲಿನ ಜೀವಿಗಳ ಪ್ರಾಣ ಹಿಂಡುತ್ತವೆ. ಮೀನುಗಳ ಒಡಲಿಗೆ ವಿಷತುಂಬಿಸಿ, ಮೀನ ಮೂಲಕ ಅದನ್ನು ಮನುಷ್ಯರಿಗೂ ಸಾಗಿಸುತ್ತವೆ. ಅದು ಮೀನುಗಳನ್ನು ಸಾಯಿಸುವುದರ ಮೂಲಕ ಬೆಸ್ತರ ಬದುಕನ್ನೂ ಸಾಯಿಸುತ್ತದೆ. ಕಡಲಿಗೆ ವಿಷ ಉಣಿಸುವ ಕೆಲಸ ಈ ಹಡಗುಗಳು ಮಾತ್ರ ಮಾಡುವುದಲ್ಲ. ಕಡಲ ದಂಡೆಯ ಮೇಲಿರುವ ಹಲವು ಕಾರ್ಖಾನೆಗಳೂ ಈ ಕೆಲಸ ಮಾಡುತ್ತಿವೆ. ಕಾರ್ಖಾನೆಗಳು ಮಲಿನ ನೀರನ್ನು ನೇರ ಕಡಲಿಗೆ ಹರಿಸಿ ಬಿಡುತ್ತವೆ. ಆಗಲೂ ಕಡಲ ಜೀವಿಗಳು ಸಾಯುತ್ತವೆ.

ತನಿಯ ತನ್ನ ತೇಡೆ ಬಲೆಯನ್ನು ಇನ್ನೂ ಬೀಸಿರಲಿಲ್ಲ. ಆತನ ಕಳೆಗುಂದಿದ ಮುಖದಲ್ಲಿ ನೋವು ತುಂಬಿತ್ತು. ಕಡಲು ಶಾಂತವಾಗಿದ್ದರೂ ಮೀನು ಸಿಗುತ್ತಿಲ್ಲ. ತನಿಯನ ದೋಣಿ ಇನ್ನೂ

ಮುಂದೆ ಸಾಗುತ್ತಿತ್ತು. ದೋಣಿ ಮುಂದೆ ಸಾಗುತ್ತಿದೆ-ಎಂದು ತನಿಯ ತನಗಿಷ್ಟ ಬಂದಷ್ಟು ದೂರಕ್ಕೆ ದೋಣಿ ಸಾಗಿಸುವ ಹಾಗಿಲ್ಲ. ಅದಕ್ಕೂ ಸರಕಾರದ ನಿಯಮವಿದೆ. ಕಡಲದಂಡೆಯಿಂದ ಎಂಟು ಮೈಲು ದೂರದ ವರೆಗಿನ ಕಡಲು ಮಾತ್ರ ನಮ್ಮದು. ಉಳಿದ ಭಾಗ ನಮ್ಮ ನಾಡಿಗೆ ಸೇರಿದ್ದಲ್ಲ.. ಅದರ ಮೇಲೆ ನಮ್ಮ ಹಕ್ಕಿಲ್ಲ. ನಾಡಿಗೆ ಸೇರಿದ ಕಡಲ ಸೀಮೆಯೊಳಗೆ ನಾವು ಮೀನ ಬೇಟೆ ಮಾಡಬಹುದು. ಸುತ್ತಾಡಬಹುದು. ಇತರ ನಾಡಿನವರು ಪರವಾನಿಗೆ ಪಡೆಯದೆ ನಮ್ಮ ಕಡಲ ಸೀಮೆಗೆ ಬರುವಂತಿಲ್ಲ. ಮೀನಬೇಟೆ ನಡೆಸುವಂತಿಲ್ಲ. ನಮ್ಮ ಪರವಾನಿಗೆ ಪಡೆಯದೆ ಬರುವ ಪರದೇಶದವರ ನೌಕೆಗಳ ಮೇಲೆ ಕಣ್ಣಿಡಲು ಕರಾವಳಿ ಕಾವಲು ಪಡೆಗಳಿವೆ. ಇವು ವೈರಿದೇಶದವರ ಯುದ್ಧ ನೌಕೆಗಳ ಮೇಲೆ ಕಣ್ಣಿಡುತ್ತವೆ. ಕಳ್ಳಮಾಲು ಹೊತ್ತು ಬರುವ ಪರದೇಶದ ಹಡಗುಗಳನ್ನು ಇವು ಬರಗೊಡವು. ಹಿಡಿದು ತಪಾಸಣೆ ಮಾಡುತ್ತವೆ. ಕೆಲವೊಮ್ಮೆ ಬೆನ್ನಟ್ಟುತ್ತವೆ.

ಬಿಸಿಲು ಬಲಿತು ಬಿಟ್ಟಿತ್ತು. ತನಿಯ ಇನ್ನೂ ಹುಟ್ಟು ಹಾಕುತ್ತಲೇ ಇದ್ದ. ಕಡಲು ಶಾಂತವಾಗಿತ್ತು. ತೆರೆಗಳೇ ಇಲ್ಲ. ತೆರೆಗಳು ಹುಟ್ಟುವುದು ಕಡಲ ನಡುವಿನಲ್ಲಿ. ಆದರೆ ಸೇರುವುದು ಕಡಲ ತೀರವನ್ನು. ಕಡಲ ನಡುವಲ್ಲಿ ಆ ತೆರೆಗಳ ಅಬ್ಬರವಿಲ್ಲ. ಸದಾ ಹುಟ್ಟುತ್ತಿರುವ ಈ ಅಲೆಗಳು ಸಾವಿರಾರು ಮೈಲುಗಳ ತನಕವೂ ಸಂಚರಿಸಬಹುದು. ಬೆನ್ನಟ್ಟಿ ಬರುವ ಗಾಳಿಯ ಅಬ್ಬರ ಮತ್ತು ವೇಗ ಬಿರುಸಾದರೆ ಅಲೆಗಳಿಗೆ ಉಬ್ಬೂ ಹೆಚ್ಚು, ವೇಗವೂ ಹೆಚ್ಚು. ಕಡಲತೀರದ ವರೆಗೂ ಅಷ್ಟೇ ಉಬ್ಬಿನಿಂದ ಚಲಿಸುತ್ತವೆ. ನಡುದಾರಿಯಲ್ಲಿ ಗಾಳಿಯ ಒತ್ತಡ ಕಡಿಮೆಯಾದರೆ ಆ ಅಲೆಗಳು ನಿಧಾನಕ್ಕೆ ಮುಂದುವರಿಯುತ್ತವೆ. ಆದರೆ ಮುಂದೆ ಹೋದಂತೆ ಕ್ಷೀಣಿಸುತ್ತವೆ. ಅವು ದುರ್ಬಲಗೊಳ್ಳದೆ ಇರಬೇಕಾದರೆ ಅವುಗಳನ್ನು ಬೆನ್ನುಗಡೆಯಿಂದ ಒತ್ತುವ ಗಾಳಿ ಇರಬೇಕಾಗುತ್ತದೆ. ಬಿರುಗಾಳಿಯ ವೇಳೆ ಈ ಅಲೆಗಳು ಭಯಂಕರ ರಭಸದಿಂದ ಚಲಿಸಬಹುದು. ಸಾಗುವ ಅಲೆಗಳಿಗೆ ಗಾಳಿಯ ಬೆಂಬಲ ಸಿಕ್ಕಿದರೆ ಅದು ಹೆಬ್ಬಲೆಯಾಗುತ್ತದೆ. ಅಂಥ ಅಲೆಗಳ ಮೊತ್ತವೇ ತುಫಾನು.

ತನಿಯನಿಗೆ ತುಫಾನಿನ ಭಯ ಸ್ವಲ್ಪ ಹೆಚ್ಚೇ. ಆತ ಎಷ್ಟೋ ಬಾರಿ ತುಫಾನಿನ ನಡುವೆ ಸಿಲುಕಿದ್ದಾನೆ. ಸಾಹಸ ಮಾಡಿ ಪಾರಾಗಿ ಬಂದಿದ್ದಾನೆ. ಆಗ ತೆಂಗಿನ ಮರದಷ್ಟು ಎತ್ತರದ ತೆರೆಗಳನ್ನೂ ಆತ ಕಂಡಿದ್ದಾನೆ. ಕಡಲ ತೆರೆಗಳ ಅಬ್ಬರ ಏನಿದ್ದರೂ ಕಡಲ ಮೇಲೆ. ಕಡಲ ಒಳಗೆ ಅವುಗಳ ಆಟ ನಡೆಯುವುದಿಲ್ಲ-ಎಂಬುದೂ ತನಿಯನಿಗೆ ಗೊತ್ತು. ಎಷ್ಟೇ ಮುಗಿಲೆತ್ತರದ ತೆರೆ ಬಂದರೂ ಇನ್ನೂರು ಅಡಿಗಿಂತ ಕೆಳಗೆ ಕಡಲ ನೀರು ಅಲುಗಾಡದು. ಅದು ಶಾಂತವಾಗಿರುತ್ತದೆ.

ತನಿಯ ಕಡಲ ಗೆಳೆಯನಾದರೂ ಆತನಿಗೆ ಕಡಲ ಸ್ವಭಾವದ ಬಗ್ಗೆ ಕೆಲವೊಂದು ವಿಚಾರ ತಿಳಿದಿಲ್ಲ. ಬಿರುಗಾಳಿ ಯಾಕೆ ಬರುತ್ತದೆ ? ಭರತ -ಇಳಿತ ದಿನಕ್ಕೆರಡು ಬಾರಿ ಯಾಕಿರುತ್ತದೆ? ಅಮಾವಾಸ್ಯೆ, ಹುಣ್ಣಿಮೆಗೆ ಕಡಲೇಕೆ ಉಬ್ಬುತ್ತದೆ? ಇವೆಲ್ಲಾ ಆತನಿಗೆ ತಿಳಿದಿಲ್ಲ. ಬಿರುಗಾಳಿಯಿಂದ ಹುಟ್ಟುವ ಅಲೆಗಳು ಅರೆತಾಸಿನೊಳಗೆ, ಉಳ್ಳಾಲದ ಕಡಲಲ್ಲಿದ್ದ ತನ್ನನ್ನು ಕುಂದಾಪುರದ ಕಡಲದಡಕ್ಕೆ ಕೊಂಡೊಯ್ದು ಅಪ್ಪಳಿಸುತ್ತದೆ ಎಂಬುದನ್ನು ಆತ ಬಲ್ಲ. ಸಮುದ್ರದಲ್ಲಿ ವಾಯುಭಾರ ಕುಸಿದರೆ ಬಿರುಗಾಳಿ ಹುಟ್ಟುತ್ತದೆ ಎಂದು ತನಿಯನಿಗೆ ಹೇಳಿದರೆ ಆತ ನಂಬಲಾರ.

ಅಲೆಗಳು ಭೂಕಂಪದಿಂದಲೂ ಹುಟ್ಟುತ್ತವೆ. ಆಗ ಆ ಕಡಲ ಅಲೆಗಳು ಮಂಗಳೂರ ಕಡಲ ನಡುವಿರುವ ತನಿಯನನ್ನು ಮದ್ರಾಸಿನ ಕಡಲ ದಡಕ್ಕೆ ಮುಕ್ಕಾಲು ತಾಸಿನೊಳಗೆ ಕೊಂಡು ಹೋಗಬಲ್ಲವು ಎಂದರೆ ಆತನಿಗೆ ಸೋಜಿನವಾಗದೆ ಇರದು. ಹೀಗೆಯೇ ಭರತ-ಇಳಿತಗಳು ಸೂರ್ಯ ಚಂದ್ರರ ಗುರುತ್ವಾ ಶಕ್ತಿಯಿಂದ ಸಂಭವಿಸುತ್ತದೆ ಎಂದರೆ ತನಿಯ ಒಪ್ಪಬಲ್ಲನೆ? ಇಲ್ಲ. ಚಂದ್ರನನ್ನು ಕಂಡರೆ ಕಡಲಿಗೆ ಇಷ್ಟ. ಅದು ಹುಣ್ಣಿಮೆ ಚಂದ್ರನನ್ನು ನೋಡಿ ಕುಣಿಯುತ್ತದೆ-ಸಂತಸದಿಂದ. ಅಮಾವಾಸ್ಯೆಗೆ ಚಂದ್ರನನ್ನು ಕಾಣದೆ ಸಿಟ್ಟಿನಿಂದ ಅಬ್ಬರಿಸುತ್ತದೆ ಎಂಬ ತನ್ನ ವಾದವನ್ನು ಮುಂದಿಡುತ್ತಾನೆ, ಆತ. ಆದರೆ ಅದಕ್ಕೆ ಕಾರಣ ಇದು. ಸೂರ್ಯ-ಚಂದ್ರರು ಗುರುತ್ವ ಬಲದಿಂದ ಭೂಮಿಯನ್ನು ಸೆಳೆಯುತ್ತಿರುತ್ತಾರೆ. ಹಾಸು ಕಂಬಳಿಯನ್ನು ಕೊಕ್ಕೆ ಹಾಕಿ ಎಳೆದಂತೆ

ಇರುತ್ತದೆ ಸೆಳೆತ. ಸೂರ್ಯ ಚಂದ್ರರ ಸೆಳೆತಕ್ಕೆ ಸಮುದ್ರದ ನೀರು ಕೊಕ್ಕೆಗೆ ಸಿಕ್ಕ ಕಂಬಳಿಯಂತೆ ಮೇಲುಬ್ಬುತ್ತದೆ. ಬಾನಿನಲ್ಲಿ ನಡು ನೆತ್ತಿಯ ಮೇಲೆ ಸೂರ್ಯ-ಚಂದ್ರರಿದ್ದಾಗ ಕಡಲಲ್ಲಿ ಹೆಚ್ಚಿನ ಉಬ್ಬರವಾಗುತ್ತದೆ. ಅದುವೆ ಭರತ. ಇದಕ್ಕೆ ಕಾರಣ ವಿಪರೀತ ಸೆಳೆತ. ಸೂರ್ಯ ಚಂದ್ರನಿಗಿಂತ ದೊಡ್ಡವನಾದರೂ, ಚಂದ್ರ, ಭೂಮಿಗೆ ತೀರಾ ಸಮೀಪದಲ್ಲಿದ್ದಾನೆ. ಅದಕ್ಕೆ ಚಂದ್ರನ ಸೆಳೆತದ ಪ್ರಭಾವ ಕಡಲಿಗೆ ಹೆಚ್ಚು.

ದಿನದಲ್ಲಿ ಎರಡು ಬಾರಿ ಭರತ-ಇಳಿತಗಳಿರುತ್ತದೆ. ಒಮ್ಮೆ ಸೂರ್ಯ ನಡುನೆತ್ತಿಗೆ ಬಂದಾಗ ಭರತ. ಮತ್ತೊಮ್ಮೆ ಭರತ ಬರುವುದು ಚಂದ್ರ ರಾತ್ರಿ ನಡುನೆತ್ತಿಗೆ ಬಂದಾಗ. ಅಮಾವಾಸ್ಯೆ ಮತ್ತು ಹುಣ್ಣಿಮೆ ದಿನಗಳಲ್ಲಿ ಭಾರಿ ಭರತಗಳಿರುತ್ತದೆ. ಮುಗಿಲೆತ್ತರದ ತೆರೆ ಏಳುತ್ತದೆ.

ಅಮಾವಾಸ್ಯೆಯ ದಿನ ಸೂರ್ಯ ಚಂದ್ರರಿಬ್ಬರೂ ಭೂಮಿಯ ಒಂದೇ ದಿಕ್ಕಿನಲ್ಲಿದ್ದು, ಸಮರೇಖೆಯಲ್ಲಿರುತ್ತಾರೆ. ಆದಿನ ಸೂರ್ಯ ನಡುನೆತ್ತಿಗೆ ಬಂದಾಗ ಕಡಲು ಹುಚ್ಚೆದ್ದು ಕುಣಿಯುತ್ತದೆ. ಆಗ ವಿಪರೀತ ಭರತವಿರುತ್ತದೆ. ಹಾಗೆಯೇ ಹುಣ್ಣಿಮೆ ದಿನ ಭೂಮಿಯ ಒಂದು ಕಡೆಗೆ ಸೂರ್ಯನಿದ್ದರೆ ಇನ್ನೊಂದು ಕಡೆ ಚಂದ್ರನಿರುತ್ತಾನೆ. ಆ ದಿನ ರಾತ್ರಿ ಚಂದ್ರ ನಡುನೆತ್ತಿಗೆ ಬಂದಾಗ ಕಡಲ ಭರತ ಅಧಿಕ. ಆಗಲೂ ಕಡಲು ವಿಪರೀತ ಅಬ್ಬರಿಸುತ್ತಾ ಭಾರೀ ತೆರೆಗಳನ್ನು ಎಬ್ಬಿಸುತ್ತದೆ. ಈ ಭಾರೀ ತೆರೆಗಳು ಬಹಳ ಬಲವುಳ್ಳವು. ಅವುಗಳಿಂದ ವಿದ್ಯುತ್ ಉತ್ಪಾದಿಸುತ್ತಾರೆ - ಪರದೇಶದಲ್ಲಿ.

ಇದೀಗ ತನಿಯ ದೋಣಿಗೆ ಹುಟ್ಟು ಹಾಕಿ, ಹಾಕಿ ದಣಿದಿದ್ದ. ಮೀನ ತೆಪ್ಪವೇ ಕಾಣಿಸುತ್ತಿಲ್ಲ. ತನಿಯನ ಮುಖ ಸಪ್ಪಗಾಗಿತ್ತು. ತನಿಯ ಹಿಂದಿರುಗುವ ಯೋಚನೆ ಮಾಡಿದ್ದ. ಮರಳಿ ಕಡಲ ದಂಡೆಯತ್ತ ಸಾಗಲು ಆರಂಭಿಸಿದ. ಇನ್ನೇನು ನಾಕು ಮಾರು ದೂರ ಸಾಗಿಲ್ಲ. ಕುರ್ಚಿ ಮೀನಿನ ತೆಪ್ಪ ಕಾಣಿಸುತ್ತಿದೆ! ತನಿಯನ ಮುಖ ಅರಳಿತು. ಆದರೆ ಆತ ಕೈಯಲ್ಲಿದ್ದ ಬಲೆ ಬೀಸಲಿಲ್ಲ. ಬೀಸಿದರೂ ಆ ಬಲೆಗೆ ಕುರ್ಚಿ ಮೀನು ಬೀಳುವುದಿಲ್ಲ. ಆತನ ಕೈಯಲ್ಲಿದ್ದಿದ್ದು ತೇಡೆ ಬಲೆ. ತೇಡೆ ಬಲೆಯಲ್ಲಿ ಕುರ್ಚಿ ಮೀನುಗಳು ತಪ್ಪಿಸಿಕೊಳ್ಳುತ್ತವೆ. ಹುಲಿ ಹಿಡಿವ ಬಲೆಯಲ್ಲಿ ಇಲಿ ಹಿಡಿದರೆ ಹೇಗಾದೀತು?

ತನಿಯ ದೋಣಿಯಲ್ಲಿದ್ದ ಕುರ್ಚಿ ಬಲೆಯನ್ನು ತೆಗದ. ಅವನಲ್ಲಿ ಕೈ ಬಲೆಯೂ ಇದೆ. ಆತ ಮೀನು ನೋಡಿ ಬಲೆ ಬೀಸುವವ. ಸಿಗಡಿ ಮೀನ ತೆಪ್ಪ ಕಂಡರೆ ಎತ್ತಿ ಬಲೆ ಬೀಸುತ್ತಾನವ. ತನಿಯ ಕುರ್ಚಿ ಮೀನಿಗೆ ಬಲೆ ಬೀಸಿದ. ಬಿದ್ದವು ಸಾವಿರಾರು ಕುರ್ಚಿ ಮೀನುಗಳು. ಅರಳಿತು ತನಿಯನ ಮನಸ್ಸು. ಮೀನ ಹಿಡಿದು ಪಡೆದ ತನಿಯ ಕಡಲ ದಂಡೆಗೆ.

ತನಿಯನ ಮುದುಡಿದ ಮನಸ್ಸು ಅರಳಿತ್ತು. ಆತನ ಶ್ರಮಕ್ಕೆ ತಕ್ಕ ಬೆಲೆ ದೊರೆತಿತ್ತು. ದೋಣಿ ತುಂಬಾ ಮೀನು ಹರಡಿತ್ತು. ಮನದಲ್ಲಿ ತನ್ನ ಒಡಲು ತುಂಬಿಸುವ ಕಡಲ ಮಾತೆಗೆ ನಮಿಸಿದ. ತನಿಯ ಕಡಲದಂಡೆ ತಲುಪಲು ಇನ್ನೂ ಸಾಕಷ್ಟು ದೂರವಿತ್ತು. ಅಷ್ಟರಲ್ಲೇ ತನಿಯನಿಗೆ ಬಾಯಾರಿತ್ತು. ವಿಪರೀತ ಬಾಯಾರಿಕೆ. ಗಂಟಲು ಒಣಗಿತ್ತು.

ಆತನ ಸುತ್ತಮುತ್ತಲೆಲ್ಲಾ ನೀರೇ ನೀರು. ಆದರೆ ಒಂದು ಗುಟುಕೂ ಕುಡಿಯಲು ಆಗದು. ಅದು ಉಪ್ಪು ನೀರು. ಅಡುಗೆ ಉಪ್ಪು ಅದರಲ್ಲಿ ತುಂಬಾ. ಉಪ್ಪು ನೀರು ಕುಡಿದರೆ ಹೇಗಾದೀತು? ಕಡಲ ನೀರಿನಲ್ಲಿ ಅಡುಗೆ ಉಪ್ಪು ಮಾತ್ರ ಕರಗಿಲ್ಲ; ಜೊತೆಗೆ ಅಡುಗೆ ಉಪ್ಪಿನ ಜಾತಿಯ ಹಲವು ಉಪ್ಪುಗಳು ಕರಗಿವೆ. ಈ ಉಪ್ಪುಗಳನ್ನ ನಾವು ತಿನ್ನುವಂತಿಲ್ಲ.

ಕಡಲ ನೀರಲ್ಲಿ ಅಡುಗೆ ಉಪ್ಪು ಕರಗಿದೆ ಎಂದು ತನಿಯನಿಗೆ ಚೆನ್ನಾಗಿ ಗೊತ್ತು. ಆತನ ಮನೆ ಪಕ್ಕದಲ್ಲಿ ಕಡಲ ನೀರಿನಿಂದ ಉಪ್ಪು ತಯಾರಿಸುತ್ತಾರೆ. ಕಡಲದಂಡೆಯ ಬಂಡೆಯ ಕುಳಿಗಳಲ್ಲಿ ನಿಂತ ಕಡಲ ನೀರು ಬಿಸಿಲಿಗೆ ಕಾದು ಉಪ್ಪಾಗುತ್ತದೆ. ಆತನಿಗೆ ಇದೆಲ್ಲಾ ತಿಳಿದಿದೆ. ಆದರೆ ತಿಳಿಯದಿರುವುದು, ಕಡಲ ನೀರು ಯಾಕೆ ಉಪ್ಪಾಗಿದೆ? ಎನ್ನುವುದು. ಕಡಲ ಬಗ್ಗೆ ಆತನಿಗೆ ಇರುವ ಅನೇಕ ಕುತೂಹಲಗಳಲ್ಲಿ ಇದೂ ಒಂದು.

**ಕಡಲ ನೀರು ಏಕೆ ಉಪ್ಪಾಗಿದೆ?**

ಈ ಕಡಲು ಹುಟ್ಟಿಕೊಂಡಿದ್ದು ನಿನ್ನೆ ಮೊನ್ನೆಯಲ್ಲ. ಎಂಬತ್ತೈದು ಕೋಟಿ ವರ್ಷಗಳ

ಹಿಂದೆಯೇ ಅದು ಹುಟ್ಟಿತ್ತು. ಅಂದಿನಿಂದ ಇಂದಿನವರೆಗೂ ಬಿಸಿಲ ಬೇಗೆಗೆ ಕಡಲ ನೀರು ಆವಿಯಾಗುತ್ತಲೇ ಬಂದಿದೆ. ಆವಿಯಾಗಿ ಮುಗಿಲು ಸೇರಿದ ಈ ನೀರಾವಿ ಮಳೆಯಾಗಿ ಭೂಮಿಗಿಳಿಯ ಬೇಕಾದರೆ ಮತ್ತೆ ಕಡಲು ತಂಪು ಗಾಳಿಯನ್ನ ಬೀಸಲೇ ಬೇಕು. ಗಾಳಿ ಬೀಸಿದರೆ ಮುಗಿಲ ಮೋಡ ನೀರಾಗಿ ಹನಿಯಲು ಆರಂಭಿಸುತ್ತದೆ. ಮಳೆ ಬರುತ್ತದೆ. ಈ ಕೆಲಸ ನಡೆದುಕೊಂಡು ಬಂದಿದ್ದು ಕೋಟಿ ಕೋಟಿ, ವರ್ಷಗಳಿಂದ. ಅಷ್ಟು ವರ್ಷಗಳಿಂದ ಸುರಿಯುತ್ತಿದ್ದ ಮಳೆನೀರು ನೇರ ಕಡಲು ಸೇರಲಿಲ್ಲ. ಬೆಟ್ಟ ಗುಡ್ಡಗಳಲ್ಲಿ ಸಾಗಿ, ನದಿಯಾಗಿ ಧುಮುಕಿತು. ನದಿ ಕಡಲಿಗೆ ಹರಿದು ಬರುವಾಗ ನೆಲದ ಮೇಲಿನ ಮಣ್ಣು, ಮರಳು, ಉಪ್ಪು, ಲವಣಾಂಶ, ಖನಿಜಗಳನ್ನು ಹೊತ್ತು ಕಡಲಿಗೆ ಸೇರಿಸಿತು. ನೆಲದ ಮೇಲಿನ ಉಪ್ಪು ಕಡಲು ಸೇರಿತು. ವರ್ಷಾನುಗಟ್ಟಲೆ ನಡೆದು ಬಂದ ಈ ಕ್ರಿಯೆ ಈಗಲೂ ಮುಂದುವರಿಯುತ್ತಿದೆ. ಮಣಗಟ್ಟಲೆ ಉಪ್ಪು, ಮಳೆನೀರಿನ ಜತೆ ಕಡಲು ಸೇರುತ್ತಲೇ ಇದೆ. ಅಡುಗೆ ಉಪ್ಪಿನಂತ, ಲವಣಾಂಶಗಳು ಅಪಾರವಾಗಿ ಕಡಲನೀರಿನಲ್ಲಿ ಇರುವುದರಿಂದಲೇ ಕಡಲ ನೀರು ಉಪ್ಪು.

ಬಾಯಾರಿದ್ದ ತನಿಯ ರಭಸದಿಂದ ಕಡಲದಂಡೆಯತ್ತ ಸಾಗುತ್ತಿದ್ದ. ನೆರಳಿಗೆ ತೆಂಗಿನಮರದಡಿ ಕೂತಿದ್ದ ಕಮಲು ತನಿಯನ ದೋಣಿ ಗುರುತಿಸಿದಳು. ಅಷ್ಟರಲ್ಲಿ ಅಲ್ಲಿಗೆ ತನಿಯನ ಹೆಂಡತಿ ಸರಸು ಬಂದಿದ್ದಳು. ಆಕೆ ಮಗಳು ವಾರಿಜಳನ್ನು ಕಡಲಸ್ನಾನಕ್ಕೆ ಕರೆ ತಂದಿದ್ದಳು. ಮಗಳಿಗೆ ಸೀತಾಳೆ ಸಿಡುಬು ಬಿದ್ದು ಅಂದಿಗೆ ಹದಿಮೂರು ದಿನ. ಹುಣ್ಣು ಹಣ್ಣಾಗಿ ಉದುರುವಾಗ ಕಡಲಲ್ಲಿ ಮೀಯಿಸಿದರೆ ಒಳ್ಳೆಯದೆಂದು ಕಡಲ ತೀರದವರ ನಂಬಿಕೆ. ಆ ನಂಬಿಕೆ ಸುಳ್ಳೂ ಅಲ್ಲ. ಕಡಲಿನ ನೀರಲ್ಲಿರುವ ಲವಣಾಂಶಗಳಿಗೆ ರೋಗಕ್ರಿಮಿಗಳನ್ನು ನಾಶ ಮಾಡುವ ಗುಣವಿದೆ. ಜೊತೆಗೆ ಹುಣ್ಣಿನ ತುರಿಕೆಯೂ ನಿಲ್ಲುತ್ತದೆ, ತಂಪೂ ಕೊಡುತ್ತದೆ.

## ಕಡಲ ಬಣ್ಣ ನೀಲಿ ಏಕೆ?



ಪುಟ್ಟ ಹುಡುಗಿ ವಾರಿಜ ನೀರಿಗಿಳಿದಳು. ಪುಟ್ಟ ನೀಲ ದಿಬ್ಬದಂತೆ ತೆರೆ ಏರಿ ಬರುತ್ತಿತ್ತು.

ಹುಡುಗಿ ಆ ನೀಲ ದಿಬ್ಬವನ್ನೇ ನೋಡಿದಳು. ತಟ್ಟನೆ ಅಮ್ಮನನ್ನು ಕೇಳಿದಳು. 'ಅಮ್ಮ ಕಡಲೇಕೆ ನೀಲಿ ಬಣ್ಣ?' - ಎಂದು. ಕಡಲ ಮೇಲಕ್ಕೆ ನೀಲ ಆಕಾಶವಿದೆ. ಅದುವೇ ಕೆಳಗಿರುವ ಕಡಲಿಗೆ ಬಣ್ಣ ಕೊಡುತ್ತದೆ - ಎಂದು ಸರಸು ಮಗಳಿಗೆ ಹೇಳಲಾರಳು. ಆಕೆಗದು ಗೊತ್ತಿಲ್ಲ.

ಕಡಲ ಬಣ್ಣ ನೀಲ, ಹಳದಿ, ಹಸಿರು, ಕೆಂಪು, ಕಂದು - ಹೀಗೆ ಯಾವುದಾದರೂ ಇರಬಹುದು. ಕಡಲಲ್ಲಿರುವ ವಸ್ತುಗಳು, ಜೀವಿಗಳು ಮತ್ತು ಆಕಾಶ - ಮೋಡ ಇದಕ್ಕೆಲ್ಲಾ ಕಾರಣ. ಕಪ್ಪನೆ ಮೋಡ ಕವಿದಿದ್ದರೆ ಕಡಲೂ ಕಪ್ಪಗಾಗಿ ಕಾಣಬಹುದು. ಚೀನಾ ದೇಶದ ಬಳಿ ಇರುವ ಕಡಲ ಬಣ್ಣ ಹಳದಿ. ಕಡಲ ಒಳಗಿನ ಮಣ್ಣಿನ ಕಣಗಳಿಂದ ಅದಕ್ಕೆ ಆ ಬಣ್ಣ.

ವಾರಿಜ ಅಲೆಗಳ ಜೊತೆ ಆಟವಾಡುತ್ತಿದ್ದಳು. ತಾಯಿ ಮಗಳ ಪ್ರಶ್ನೆಗೆ ಉತ್ತರಿಸಲಿಲ್ಲ. ಮಗಳು ಮತ್ತೆ ಪ್ರಶ್ನಿಸಿದಳು. 'ಅಮ್ಮ ಕಡಲು ಹೇಗೆ ಹುಟ್ಟಿದ್ದು? ಯಾವಾಗ ಹುಟ್ಟಿದ್ದು? ಅಪ್ಪ ಹುಟ್ಟುವಾಗ ಕಡಲು ಹುಟ್ಟಿತ್ತಾ? - ಎಂದು. ಸರಸು ಇದಕ್ಕೆಲ್ಲ ಹೇಗೆ ಉತ್ತರಿಸಿಯಾಳು? ಆಕೆಯೂ ಇಂತಾ ಪ್ರಶ್ನೆಗಳನ್ನೇ ಕೇಳಿದ್ದಳು - ಚಿಕ್ಕಪ್ರಾಯದಲ್ಲಿ. ಪಕ್ಕದ ಮನೆಯ ಗಣಪಯ್ಯನವರಲ್ಲಿ. ಗಣಪಯ್ಯನವರು ಬಹಳ ಓದಿದವರು, ತಿಳಿದವರು. ಕಡಲನ್ನು ಅರೆದು ಕುಡಿದವರು.

## ಕಡಲು ಹುಟ್ಟಿದ್ದು ಹೇಗೆ?

ಗಣಪಯ್ಯನವರು ಅಂದು ಸರಸುವಿನ ಪ್ರಶ್ನೆಗಳಿಗೆ ಸಮಾಧಾನದಿಂದ ಉತ್ತರಿಸಿದ್ದರು. ಆರು ನೂರು ಕೋಟಿ ವರ್ಷಗಳ, ಹಿಂದೆ ಉರಿಯುವ ಸೂರ್ಯನಿಂದ ಒಂದು ತುಂಡು ಸಿಡಿದು ಬಿತ್ತು. ಅದು ಅತಿ ಕಾವಿನಿಂದ ಉರಿಯುತ್ತಿತ್ತು. ಅದುವೇ ಭೂಮಿಯಾಯ್ತು. ಅದು ಬಿಸಿ ಬಿಸಿ ರಾಗಿಮುದ್ದೆಯಂತಿತ್ತು. ಅದರ ಹೊರಮೈ ಮಿದು ಮಿದುವಾಗಿತ್ತು; ಒಳಗಡೆ ಬಿಸಿಕಾವಿನ ಉರಿಯಿತ್ತು. ಬಿಸಿ ಮುದ್ದೆಗೆ ತಟ್ಟೆ ಮುಚ್ಚಿಟ್ಟರೆ ಹೇಗಿರುತ್ತದೆ? ಒಳಗೆ ತಟ್ಟೆ ತುಂಬಾ ಹಬೆ ಇರುತ್ತದೆ. ಅಥವ ನೀರಾವಿ ಇರುತ್ತದೆ. ಹಾಗೇ ಬಿಸಿ ಭೂಮಿಯ ಸುತ್ತ ಒಳಗಡೆಯ ಬಿಸಿಗೆ

ಜ್ವಾಲಾಮುಖಿಗಳೆದ್ದವು. ಅಂದರೆ ಬೆಂಕಿಯುಂಡೆಗಳು. ಭೂಮಿಯ ಸುತ್ತ ಏರು ತಗ್ಗುಗಳೆದ್ದವು. ಆಗಲೂ ನೀರಾವಿ ಬಿಡುಗಡೆಯಾಯಿತು. ವಾತಾವರಣದಲ್ಲಿ ಉಗಿಯ ಮುಗಿಲು ದಟ್ಟವಾಯ್ತು. ಭೂಮಿಯ ಒಳಗಿನ ಚಲನೆಯಿಂದ ಮಿದು ಭೂಮಿಯ ತೊಗಟೆಯಲ್ಲಿ ಮತ್ತೆ ಏರು ತಗ್ಗುಗಳೆದ್ದವು. ನೀರಾವಿಯ ಈ ಮುಗಿಲು ನಾಕು ನೂರು ಕೋಟಿ ವರ್ಷಗಳ ಕಾಲ ಭೂಮಿಯ ಮೇಲಿತ್ತು. ಆಗ ಭೂಮಿ ಬಿಸಿಯಾಗಿಯೇ ಇತ್ತು. ಸುಮಾರು ಇನ್ನೂರು ಕೋಟಿ ವರ್ಷಗಳ ಹಿಂದೆ ಭೂಮಿ ತಣಿಯತೊಡಗಿತು. ಭೂಮಿ ತಣಿದಂತೆ ಕವಿದಿದ್ದ ಉಗಿಯ ಮುಗಿಲು ಮಳೆಯಾಗಿ ಹನಿಯ ತೊಡಗಿತು. ಮಳೆ ಎಂದರೆ ಈಗಿನಂತಲ್ಲ. ಎರಡು ಮೂರು ದಿನ ಸುರಿದದ್ದಲ್ಲ. ಕೋಟಿ, ಕೋಟಿ ವರ್ಷಗಳ ಕಾಲ ಮಳೆ ಸುರಿಯಿತು. ಸುರಿದ ಮಳೆ ಭೂಮಿಯ ಏರು ತಗ್ಗುಗಳಲ್ಲಿ ತುಂಬಿಕೊಂಡವು. ಅದುವೇ ಮುಂದೆ ಕಡಲಾಯಿತು. ಕಡಲು ಹುಟ್ಟಿ ಸುಮಾರು ಎಂಬತ್ತೈದು ಕೋಟಿ ವರ್ಷಗಳಾದವು.

ಭೂಮಿಯ ಮೇಲಿರುವುದು ಒಂದೇ ಒಂದು ಕಡಲು. ಆದರೆ ಬೇರೆ ಬೇರೆ ನಾಡಿನವರು ಅದನ್ನ ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರಷ್ಟೆ. ಕವಿಗಳು ಹೇಳಿದ್ದಾರೆ. ಏಳು ಕಡಲುಗಳಿವೆ ಎಂದು. ಅದು ಅವರ ಕಲ್ಪನೆ. ಕಡಲಿರುವುದು ಒಂದು; ತಿಳಿದವರು ಅದನ್ನು ಬೇರೆ ಬೇರೆ ಕಡೆ, ಬೇರೆ ಬೇರೆ ಹೆಸರಲ್ಲಿ ಕರೆಯುತ್ತಾರೆ. ಭೂಮಿಯಲ್ಲಿ ಮುಕ್ಕಾಲು ವಾಸಿ ಇರುವುದೇ ಕಡಲು. ಕಾಲುವಾಸಿ ಮಾತ್ರ ನೆಲ. ಅದಕ್ಕೆ ಮಾನವ ತನಗೆ ನೆಲ ಸಾಲಲ್ಲ ಎಂದು ಕಡಲ ಜಾಗ ಆಕ್ರಮಿಸುತ್ತಾನೆ. ಕಡಲು ಮುಂದೆ ಒಂದು ದಿನ ಆ ತನ್ನ ಜಾಗವನ್ನು ಮತ್ತೆ ಪಡೆದುಕೊಳ್ಳುತ್ತದೆ.

ಗಣಪಯ್ಯನವರ ಮಾತು ಕೇಳಿ ಸರಸು ಮತ್ತೊಂದು ಪ್ರಶ್ನೆ ಕೇಳಿದ್ದಳು. ಕಡಲು ಹುಟ್ಟುವಾಗ ಮನುಷ್ಯ ಜಾತಿ ಇದ್ದಿತ್ತಾ? ಎಂದು. ಕಡಲು ಹುಟ್ಟಿ ಕೊಂಡ ಎಷ್ಟೋ ಕೋಟಿ ವರ್ಷಗಳ ನಂತರ ಜೀವ ಎನ್ನುವುದು ಕಾಣಿಸಿತ್ತು. ಅಂದರೆ ಐವತ್ತು ಕೋಟಿ ವರ್ಷಗಳ ನಂತರ ಕಡಲಲ್ಲೇ ಮೊದಲು ಸರಳ ಜೀವಿ ಕಾಣಿಸಿಕೊಂಡಿದ್ದು. ಮನುಷ್ಯ ಜೀವಿ ಕಾಣಿಸಿಕಂಡಿದ್ದು ಕೇವಲ ಹತ್ತು ಲಕ್ಷ ವರ್ಷಗಳ ಹಿಂದೆ.

ಇದೀಗ ಸರಸು ಬಾಲ್ಯದಲ್ಲಿ ಗಣಪಯ್ಯನವರು ಹೇಳಿದ್ದನ್ನ ನೆನಪಿಸಿಕೊಂಡಳು. ಆದರೆ ಆಕೆಗೆ ಅದನ್ನ ಮಗಳಿಗೆ ಹೇಳಲಿಕ್ಕಾಗದು. ವಿವರಿಸುವುದು ಕಷ್ಟದ ಕೆಲಸ. ಸರಸು ಸುಮ್ಮನಿದ್ದಳು. - ಅಮ್ಮನ ಮೌನ ಮಗಳ ಬಾಯಿಮುಚ್ಚಿಸಿತ್ತು.

ತನಿಯನ ದೋಣಿ ಕಡಲ ದಂಡೆಯ ಕಡೆ ಬರುತ್ತಿತ್ತು. ತೆರೆಯ ಮೇಲೆ ಕೂತಿದ್ದ ಕಡಲ ಕಾಗೆಗಳು ಹಾರಿದವು. ತನಿಯನ ದೋಣಿಯತ್ತ. ಕಮಲು ಎದ್ದು ನಿಂತಳು. ಪುಟ್ಟವಾರಿಜಳೂ ಕಡಲ ನೀರಿನಿಂದ ಮೇಲೆ ಬಂದು ದಡದಲ್ಲಿ ನಿಂತಳು. ಆಕೆಯ ಕಾಲಡಿ ಏಡಿಗಳು ಅತ್ತಿತ್ತ ಓಡುತ್ತಿದ್ದವು. ಪುಟ್ಟ ವಾರಿಜ ಏಡಿಯ ಹಿಂದೆ ತಾನೂ ಓಡಿದಳು. ಏಡಿಗಳು ಬಿಲ ಹೊಕ್ಕವು. ವಾರಿಜ ಏಡಿಯೊಂದರ ಬಿಲ ಬಗೆದಳು. ಸೋಜಿಗ ಪಟ್ಟಳು. ಆ ಬಿಲದಲ್ಲಿ ಹಲವು ಮೊಟ್ಟೆಗಳಿದ್ದವು. ಮೂಸಂಬಿ ಹಣ್ಣಿನಷ್ಟು ದೊಡ್ಡ ಮೊಟ್ಟೆ! ಆಕೆ ಅಮ್ಮನನ್ನು ಕರೆದಳು. ಸರಸು ಬಂದಳು. ಮೊಟ್ಟೆ ಕಂಡು ಅದು ಏಡಿಯ ಮೊಟ್ಟೆಯಲ್ಲ. ಕಡಲ ಆಮೆಯ ಮೊಟ್ಟೆ - ಎಂದಳು.

ಆಗ ಕಮಲು ಕುತೂಹಲದಿಂದ ಬಂದಳು. 'ತೆಗೆ ಅದನ್ನ, ಬೇಯಿಸಿ ತಿನ್ನೋಣ' - ಅಂದಳು. ಆದರೆ ಸರಸು ಒಪ್ಪಲಿಲ್ಲ. ವಾರಿಜಳೂ ಒಪ್ಪಲಿಲ್ಲ. ಪಾಪ! ಮೊಟ್ಟೆ ಒಡೆದು ಮರಿಗಳು ಕಡಲು ಸೇರಲಿ - ಅಂದಳು ಸರಸು.

ಕಡಲಾಮೆ ಹೆಚ್ಚಾಗಿ ರಾತ್ರಿಕಾಲಕ್ಕೆ ಕಡಲದಂಡೆಗೆ ಬರುತ್ತದೆ. ಮೊಟ್ಟೆ ಇಡುವುದಕ್ಕೆ. ಮೊಟ್ಟೆಗಳನ್ನು ಮರಳಿಂದ ಮುಚ್ಚಿ ಮರಳಿ ಕಡಲಿಗಿಳಿಯುತ್ತದೆ. ದಿನಗಳೆದಂತೆ ಮೊಟ್ಟೆಯಿಂದ ಮರಿ ಹೊರಬರುತ್ತದೆ. ವಾರಿಜ ದೊಡ್ಡ ಬುಟ್ಟಿ ಗಾತ್ರದ ತಾಯಿ ಆಮೆಯನ್ನು ಕಂಡಿದ್ದಾಳೆ. ತನಿಯನೊಮ್ಮೆ ಅದನ್ನ ಹಿಡಿದು ಮನೆಗೆ ತಂದಿದ್ದ. ಅದನ್ನ ಹೊತ್ತವರು ಹತ್ತು ಮಂದಿ. ಆಮೆಯನ್ನು ಕಂಡು ಸರಸು ಕರುಣೆ ತೋರಿದ್ದಳು. ಕೊಲ್ಲಲು - ತಿನ್ನಲು ಆಕೆಗೆ ಮನಸ್ಸು ಬಂದಿರಲಿಲ್ಲ. ಆಮೆಯನ್ನು ಕಡಲಿಗೆ ಬಿಟ್ಟು ಬಂದಿದ್ದಳು.ಇದೀಗ ಸರಸು ಮೊಟ್ಟೆಗಳ ಮೇಲೆ ಮರಳು ಮುಚ್ಚಿದಳು. ಪುಟ್ಟ ವಾರಿಜಳ ಮನಸ್ಸಲ್ಲಿ ಕಡಲ ಆಮೆಯೇ ತುಂಬಿತ್ತು. ಕಡಲಲ್ಲಿ

ಕಡಲಾನೆ, ಕಡಲು ಸಿಂಹ, ಕಡಲ ಹಾವು, ಕಡಲುಗೋವು, ಕಡಲು ನಾಯಿಗಳಿವೆ - ಎಂದು ವಾರಿಜಳಿಗೆ ತನಿಯ ಹೇಳಿದ್ದ. ಗಾತ್ರ, ಆಕಾರದಲ್ಲಿ ಆನೆ, ಗೋವು, ನಾಯಿಗಳನ್ನ ಇವು ಹೋಲುವ ಕಾರಣ ಆ ಹೆಸರುಗಳು. ಕಡಲಾನೆಯನ್ನು ಎಣ್ಣೆಗಾಗಿ ಕೊಲ್ಲುತ್ತಿದ್ದಾರೆ. ಕಡಲು ನಾಯಿಯನ್ನು ಮಾಂಸಕ್ಕಾಗಿ ಕೊಲ್ಲುತ್ತಿದ್ದಾರೆ ಎಂದು ತನಿಯನಿಗೆ ಯಾರೋ ಹೇಳಿದ್ದರು. ಅದನ್ನ ಮಗಳಿಗೂ ಹೇಳಿದ್ದ. ವಾರಿಜ ಅತ್ತಿದ್ದಳು ಆವಾಗ. ಕಡಲ ಗೋವನ್ನು ಚರ್ಮಕ್ಕಾಗಿ ಕೊಂದಿದ್ದಾರೆ. ಅದರ ಇಡಿಯ ಸಂತಾನವನ್ನೇ ಕಡಲಿಂದ ಅಳಿಸಿದ್ದಾರೆ ಎಂದು ತಿಳಿದರೆ ಕರಿಯನಿಗೂ ದುಃಖವಾಗುತ್ತದೆ.

## ಕಡಲ ಮೀನುಗಳು

ಕಡಲಲ್ಲಿ ಬಣ್ಣ ಬಣ್ಣದ ಮೀನುಗಳಿವೆ. ಸುಮಾರು ನಲವತ್ತು ಸಾವಿರ ಜಾತಿಯ ಮೀನುಗಳಿವೆ ಎಂದು ತನಿಯನಿಗೆ ಗಣಪಯ್ಯ ಹೇಳಿದ್ದರು. ಅದನ್ನ ತನಿಯ ಮಗಳಿಗೆ ಹೇಳಿದಾಗ ವಾರಿಜ ನಂಬಿರಲಿಲ್ಲ. ವಾರಿಜಳೇಕೆ ತನಿಯನೂ ನಂಬಿರಲಿಲ್ಲ. ಇಂತಾ ಸೋಜಿಗದ ಹಲವು ಸಂಗತಿಯನ್ನು ಗಣಪಯ್ಯನವರು ತನಿಯನಿಗೆ ಹೇಳಿದ್ದರು. ಕಡಲೊಳಗೆ ಎರಡು ತೆಂಗಿನ ಮರದಷ್ಟು ಎತ್ತರದ ಮೀನುಗಳಿವೆ. ಅವು ಜೊತೆ ಸೇರಿದರೆ ಇಡಿಯ ಹಡಗನ್ನೇ ಉರುಳಿಸಬಲ್ಲವು. ಅವುಗಳೇ ಶಾರ್ಕ್ ಮೀನುಗಳು. ಈ ಮೀನುಗಳಲ್ಲಿ ನೂರಕ್ಕಿಂತಲೂ ಹೆಚ್ಚು ಜಾತಿಗಳಿವೆ. ಮನುಷ್ಯ ತಿಳಿದಂತೆ ಈ ಮೀನುಗಳು ನಮಗೆ ಹಾನಿಕಾರಕವಲ್ಲ. ಆಹಾರಕ್ಕಾಗಿ ಹಡಗನ್ನು ಹಿಂಬಾಲಿಸುತ್ತವೆ ಅಷ್ಟೆ. ಮನುಷ್ಯರನ್ನ ಇವು ಕೊಂದು ತಿನ್ನುವುದಿಲ್ಲ. ಅವುಗಳಿಗೆ ಪುಟ್ಟ ಹಲ್ಲುಗಳಿದ್ದು, ತೆಂಗಿನಕಾಯಿ ತೂರುವಷ್ಟು ಅಗಲದ ಗಂಟಲು ಇದೆ. ಆ ಗಂಟಲು ಮನುಷ್ಯರನ್ನ ನುಂಗುವಂತಾದ್ದೆ?

ಒಂದೆರಡು ಜಾತಿಯ ಶಾರ್ಕ್ ಮೀನುಗಳು ಮಾತ್ರ ಮನುಷ್ಯನಿಗೆ ಅಪಾಯಕಾರಿ. ಅವುಗಳು ಮನುಷ್ಯನನ್ನ ತಿನ್ನುವುದಿಲ್ಲ. ಆದರೆ ದಾಳಿ ಮಾಡುತ್ತವೆ. ಅವುಗಳು ವೇಲ್ ಶಾರ್ಕ್ ಮತ್ತು ವೈಟ್ ಶಾರ್ಕ್‌ಗಳು.

ಇದುವರೆಗೆ ತಿಮಿಂಗಿಲ ಅತಿ ದೊಡ್ಡ ಮೀನೆಂದು ಕರಿಯ ನಂಬಿದ್ದ. ಆದರೆ ಶಾರ್ಕ್ ಮೀನೇ ಅತಿ ದೊಡ್ಡ ಮೀನು. ತಿಮಿಂಗಿಲ ಮೀನೇ ಅಲ್ಲ. ಹಾಗೆಂದು ಹೇಳಿದವರು ಗಣಪಯ್ಯನವರು. ತಿಮಿಂಗಿಲ ಮೀನಲ್ಲ., ಅದು ನಾಯಿ, ಬೆಕ್ಕು, ನರಿಯಂತೆ ಮರಿ ಇಡುವ ಸಸ್ತನಿ. ಮನುಷ್ಯರಂತೆ ಅದು ಮರಿಗೆ ಹಾಲು ಉಣಿಸುತ್ತದೆ. ಮರಿಯನ್ನ ಬಹಳ ಜೋಪಾನ ಮಾಡುತ್ತದೆ. ಅವಕ್ಕೂ ನಮಗಿದ್ದಂತೆ ಶ್ವಾಸಕೋಶಗಳಿವೆ -ಉಸಿರಾಟಕ್ಕೆ. ಮೀನಿನಂತೆ ಕಿವಿರುಗಳಿಲ್ಲ. ನಮ್ಮಂತೆ ಮೂಗಿನ ಹೊಳ್ಳೆಗಳಿವೆ. ಮೆದುಳು, ಎಲುಬು ಕೂಡಾ ಸಸ್ತನಿಗಳಂತಿದೆ. ಮೀನಿನ ಒಳರಚನೆ ತಿಮಿಂಗಿಲದಲ್ಲಿ ಕಾಣಿಸದು. ಅದು ಸಮುದ್ರದಿಂದ ಮುಖವೆತ್ತಿ ಮೂಗಿನಲ್ಲಿ ಉಸಿರಾಡಿ ಮತ್ತೆ ನೀರಲ್ಲಿ ಮುಳುಗುತ್ತದೆ. ಮತ್ತೆ ಮೇಲಕ್ಕೆ ಬಂದು ಉಸಿರಗಾಳಿಯನ್ನು ಬಿಟ್ಟು ಕೊಡುತ್ತದೆ. ಆ ಗಾಳಿಯ ಬಲಕ್ಕೆ ಕಡಲಲ್ಲಿ ಕಾರಂಜಿ ಏಳುತ್ತದೆ.

ತಿಮಿಂಗಿಲಗಳ ಒಂದೆರಡು ಜಾತಿಗಳನ್ನ ಬಿಟ್ಟರೆ ಉಳಿದವುಗಳಿಗೆ ಹಲ್ಲುಗಳಿಲ್ಲ. ಮೇಲು ದವಡೆಯಿಂದ ಎಲುಬಿನ ಹಲಗೆಗಳು ಇಳಿದಿದ್ದು, ಅವು ಹಲ್ಲುಗಳಂತೆ ಕೆಲಸ ಮಾಡುತ್ತವೆ. ತಿಮಿಂಗಿಲದ ಎದುರು ಆನೆ, ಇರುವೆಯಂತೆ ಕಾಣಿಸುತ್ತದೆ. ಹಾಗಿದ್ದರೆ ಅದರ ಗಾತ್ರ ಎಷ್ಟಿದ್ದೀತು?. ಇವು ತೆಂಗಿನಮರಗಳಷ್ಟು ಉದ್ದವಿದ್ದು ಲಕ್ಷ ಮಣ ಭಾರವಿರುತ್ತದೆ. ತಿಮಿಂಗಿಲಕ್ಕೆ ಆಹಾರ ಬೇಕೆಂದು ಅನಿಸಿದಾಗ ಬಾಯಿಯನ್ನು ತೆರೆದಿಡುತ್ತದೆ. ತೆರೆದಿಟ್ಟ ಬಾಯೊಳಗೆ ಮೀನ ತೆಪ್ಪ ಹೊಕ್ಕಾಗ ಬಾಯಿ ಮುಚ್ಚುತ್ತದೆ. ದವಡೆಯಿಂದ ನೀರೆಲ್ಲಾ ಸುರಿದು ಹೋಗುತ್ತೆ. ಮೀನ ರಾಶಿ ಅದರ ಬಾಯಲ್ಲಿರುತ್ತದೆ. ಹಲ್ಲಿರುವ ತಿಮಿಂಗಿಲಗಳ ಒಂದು ಜಾತಿ ಮಾತ್ರ ಮನುಷ್ಯರನ್ನ ತಿನ್ನುತ್ತದೆ. ಅದು ಬಿಸಿರಕ್ತದ ಪ್ರಾಣಿಗಳನ್ನು ಮಾತ್ರ ಇಷ್ಟಪಡುತ್ತೆ.

ತನಿಯನಿಗೆ ಗಣಪಯ್ಯನವರು ಇನ್ನೊಂದು ಸಂಗತಿ ಹೇಳಿದ್ದರು. ಅದು ವಿದ್ಯುತ್ ಮೀನಿನ ಬಗ್ಗೆ. ಕಡಲಲ್ಲಿರುವ ಈ ಮೀನುಗಳು ವೈರಿಗಳ ಕಡೆ ವಿದ್ಯುತ್ ಹರಿಸುತ್ತವಂತೆ. ಆಗ ವೈರಿಗೆ ಮಿಸುಕಾಡಲಾಗದು. ಅವುಗಳಲ್ಲಿ ವಿದ್ಯುತ್ ಉತ್ಪಾದಿಸುವ ಅಂಗಗಳಿವೆ. ಇದು ನಿಜ ಸಂಗತಿ.

ಕಡಲ ತಡಿಯಲ್ಲಿರುವ ಹಲವು ಜಾತಿಯ ಮೀನುಗಳು ಮಿಂಚುಹುಳದಂತೆ ಬೆಳಕೂ ಬೀರಬಲ್ಲವು. ಕಡಲ ಅಡಿ ಕತ್ತಲ ಲೋಕ. ಅಲ್ಲಿ ಈ ಮೀನುಗಳು ತಮ್ಮ ದೇಹದ ಬೆಳಕು ಬಳಸಿ ಕೊಳ್ಳುತ್ತವೆ.

ಗಣಪಯ್ಯನವರು ಇಷ್ಟೆಲ್ಲಾ ಆಸಕ್ತಿಯ ವಿಷಯ ಹೇಳಿದ್ದರು. ಜೊತೆಗೆ ಒಂದು ನೋವಿನ ಸಂಗತಿಯನ್ನೂ ಹೇಳಿದ್ದರು. ಮನುಷ್ಯ ತಿಮಿಂಗಿಲವನ್ನು ನಿರಂತರ ಬೇಟೆಯಾಡುತ್ತಿದ್ದಾನೆ. ತಿಮಿಂಗಿಲಧ ಎಲ್ಲಾ ಭಾಗಗಳು ಮನುಷ್ಯನಿಗೆ ಹಣ ತಂದು ಕೊಡುತ್ತಿವೆ. ಅದರ ಚರ್ಮದಡಿ ಇರುವ ಒಂದಡಿ ದಪ್ಪದ ಕೊಬ್ಬು ದೀಪದೆಣ್ಣೆಯಾಗಿ ಬಳಕೆಯಾಗುತ್ತದೆ. ಸಾಬೂನು ತಯಾರಿಕೆಯಲ್ಲಿ ಇದು ಉಪಯುಕ್ತ. ಇದರ ಮಾಂಸ ತಿನ್ನುವುದಕ್ಕೆ ರುಚಿ. ಇದರ ಮಾಂಸ ಮತ್ತು ಎಲುಬು ಗೊಬ್ಬರವಾಗಿ ಬಳಸುತ್ತಾರೆ. ಒಂದು ಜಾತಿಯ ತಿಮಿಂಗಿಲದ ತಲೆಯಲ್ಲಿ ತುಂಬಿರುವ ಎಣ್ಣೆ, ಮುಲಾಮು, ಮೇಣದ ಬತ್ತಿ, ಸೌಂದರ್ಯವರ್ಧಕ ವಸ್ತುಗಳಿಗೆ ಬಳಕೆಯಾಗುತ್ತಿದೆ. ತಿಮಿಂಗಿಲದ ಹಲ್ಲು, ದವಡೆಯಿಂದ ಒಳ್ಳೆಯ ದಂತ ಪಡೆಯಬಹುದು. ಅದರ ಚರ್ಮಕ್ಕೂ ಭಾರಿ ಬೇಡಿಕೆ ಇದೆ.

ತನಿಯ ಗಣಪಯ್ಯ ಹೇಳಿದ್ದನ್ನೆಲ್ಲ ವಾರಿಜಳಿಗೆ ಹೇಳಿದ್ದ. ಆಕೆಯ ಪುಟ್ಟ ತಲೆಯೊಳಗೆ ಅಷ್ಟೆಲ್ಲಾ ಹಿಡಿಸದು. ಆದರೂ ತನಿಯನಿಗೆ ಮಗಳೆಂದರೆ ಇಷ್ಟ. ಮಗಳಿಗಾಗಿಯೆ ಗಣಪಯ್ಯನವರಲ್ಲಿ ಕೆಲವು ಸಂಗತಿ ಕೇಳುತ್ತಿದ್ದ. ಒಮ್ಮೆ ಮಲ್ಪೆಯ ತೋನ್ಸೆಪಾರ್ಕಿನ ಬಗ್ಗೆ ಕೇಳಿದ್ದ. ತೋನ್ಸೆ ಪಾರ್ಕು ಒಂದು ದ್ವೀಪ. ಸುತ್ತಲೂ ನೀರು ಆವರಿಸಿಕೊಂಡಿದೆ. ನಡುವಲ್ಲಿ ನೆಲವಿದೆ. ಅದು ಕಡಲದಂಡೆಯಿಂದ ಅರೆಮೈಲು ದೂರದಲ್ಲಿದೆ.

## ಕಡಲ ದ್ವೀಪ ಹಾಗೂ ಭೂಕಂಪ

ಸಾವಿರ ಸಾವಿರ ವರ್ಷಗಳ ಹಿಂದೆ ಆ ದ್ವೀಪ ಇರುವ ಜಾಗದ ಸುತ್ತ ಮುತ್ತ ಮೈಲಿಗಟ್ಟಲೆ ನಾಡಿತ್ತಂತೆ. ಒಮ್ಮೆ ಭೂಮಿ ಆಚೀಚೆ ಹೋಗಿ, ಕಡಲು ಉಬ್ಬರಿಸಿ ಬಂತಂತೆ. ಸುತ್ತಲ

ನೆಲವನ್ನು ಕಬಳಿಸಿ ಬಿಟ್ಟಿತಂತೆ. ಅಲ್ಲಿದ್ದ ಎತ್ತರದ ಗುಡ್ಡಗಳು ನೀರಲ್ಲಿ ಮುಳುಗಲಿಲ್ಲ. ಅಂತಾ ಒಂದು ಗುಡ್ಡದ ತಲೆಯೇ ಆ ದ್ವೀಪವಂತೆ. ತೋನ್ಸೆ ಪಾರ್ಕಿನ ಬಗ್ಗೆ ತಿಳಿದವರು ಇನ್ನೊಂದು ವಿಚಾರ ಹೇಳುತ್ತಾರೆ. ಕಡಲಡಿ ಜ್ವಾಲಾಮುಖಿ ಎದ್ದು ಆ ದ್ವೀಪ ಎದ್ದಿದೆ ಎಂದು. ಸಮುದ್ರದಡಿಯ ನೆಲ ಬೆಂಕಿ ಉಗುಳಿದರೆ ಅಲ್ಲಿ ಗುಡ್ಡ-ಬೆಟ್ಟ-ಪರ್ವತಗಳು ಏಳುತ್ತವೆ. ನೀರಿನಿಂದ ಆವರಿಸಿದ್ದ ಪರ್ವತದ ತಲೆಯೇ ದ್ವೀಪವಾಗುತ್ತದೆ. ಹೀಗೆಂದು ಗಣಪಯ್ಯನವರು ತನಿಯನಿಗೆ ಹೇಳಿದಾಗ ತನಿಯ ಬೆಪ್ಪಾಗಿದ್ದ. ಕಡಲಡಿ ಜ್ವಾಲಾಮುಖಿ ಏಳುತ್ತದೆ ಎಂದು ಅವನಿಗೆ ತಿಳಿದದ್ದೇ ಆವತ್ತು. ಇವತ್ತು ನಾವಿರುವ ಜಾಗದಡಿ ಹಿಂದೆ ಕಡಲಿತ್ತು. ಈಗ ಕಡಲಿರುವ ಜಾಗವೂ ಹಿಂದೆ ನೆಲವಾಗಿತ್ತು.

ಭೂಕಂಪವಾದರೆ ಹೀಗೆಲ್ಲಾ ಆಗುತ್ತದೆ. ಜ್ವಾಲಾಮುಖಿಯೂ ಈ ಕೆಲಸವನ್ನು ಮಾಡುತ್ತದೆ. ಇವತ್ತು ನೆಲವಾಗಿರುವುದು ನಾಳೆ ಕಡಲಾಗಬಹುದು. ನಾಳೆ ಕಡಲಿದ್ದಲ್ಲಿ ಮತ್ತೆ ನೆಲವೇಳಬಹುದು. ಕಡಲ ಅಂಚಿನಲ್ಲಿ ಭೂಕಂಪವಾದರೆ ಕಡಲು ಹಿಂದಕ್ಕೆ ಸರಿಯಬಹುದು. ಸರಿದ ಕಡಲು ಮುನ್ನುಗಿ ಬಂದು ಮೈಲಿಗಟ್ಟಲೆ ನೆಲವನ್ನೂ ನುಂಗಬಹುದು. ಇಡಿಯ ಊರನ್ನೇ ಕಡಲಡಿಗೆ ಜಾರಿಸಬಹುದು. ಪರದೇಶದಲ್ಲಿ ಇಂತಾ ನೋವಿನ ಸಂಗತಿ ಬಹಳ ನಡೆದಿದೆ ಎಂದಾಗ ತನಿಯ ಬೆಚ್ಚಿದ್ದ. ಕಡಲಲ್ಲಿ ವಾಯುಭಾರ ಕುಸಿದು ಚಂಡಮಾರುತ ಎದ್ದರೂ ಕಡಲು ನುಗ್ಗಿ ಬರಬಹುದು. ಚಿಕ್ಕ ಊರಿನಂತಿರುವ ಹಡಗನ್ನು ಎತ್ತಿ ಎಸೆಯಬಲ್ಲದು. ತೆರೆಯ ಮೀನುಗಳನ್ನು ಎತ್ತಿ ಮೀನ ಮಳೆ ಬರಿಸಬಲ್ಲದು. ಇಪ್ಪತ್ತೆರಡು ವರ್ಷಗಳ ಹಿಂದೆ ತಮಿಳುನಾಡಿನ ಧನುಷ್ಕೋಟಿ ಎಂಬ ಊರು ಹೀಗೇ ಧ್ವಂಸವಾಯಿತು. ಗಣಪಯ್ಯನವರು ಹೀಗೆ ಅಂದಾಗ ತನಿಯ ತಲೆಬಿಸಿಯಿಂದ ಎದ್ದು ಬಂದಿದ್ದ.

ಇದೀಗ ವಾರಿಜ ಕಡಲಾಮೆಯ ಮೊಟ್ಟೆಗಳ ಬಳಿ ಕೂತು ಮರಳು ಮುಚ್ಚುತ್ತಿದ್ದಳು. ಅಷ್ಟರಲ್ಲಿ ತನಿಯನ ದೋಣಿ ಕಡಲ ತೀರಕ್ಕೆ ಬಂದಿತ್ತು. ತನಿಯ ದೋಣಿಯಿಂದ ಜಿಗಿದ. ಕಮಲು ಮತ್ತೆ ತೆಂಗಿನಮರದಡಿ ಕೂತಿದ್ದಳು. ಅವಳಿಗೆ ಈಗ ಯೋಚನೆ! ಮನೆ ಕಳೆದುಕೊಂಡ ತನ್ನ ತಾಯಿ

ಹೇಗೆ ದುಃಖಿಸಬಹುದು ಎಂದು? ಕಡಲಿಗೆ ಕಮಲ ಬೈದಳು. ಆಸೆಬುರುಕ ಕಡಲು. ತನ್ನೊಳಗೆ ಅಷ್ಟು ಸಂಪತ್ತಿದೆ ಮತ್ತೂ ಬಡವರ ಮನೆ ಮೇಲೆ ಕಣ್ಣು - ಎಂದು ಕಡಲಿಗೆ ಉಗಿದಳು.

**ಕಡಲ ಸಂಪತ್ತು**

ಆಕೆ ಬಯ್ಯುವುದೂ ಒಂದು ರೀತಿ ಸರಿಯೆ. ಕಡಲಲ್ಲಿ ಎಷ್ಟು ಸಂಪತ್ತಿಲ್ಲ. ಮತ್ತೇಕೆ ಅದಕ್ಕೆ ಸುತ್ತಲ ಆಸ್ತಿ. ಕಡಲ ನೀರಲ್ಲಿ ಉಪ್ಪಿನ ಸಂಪತ್ತೇ ಇದೆ. ಇಂಗಿಸಿ ಉಪ್ಪು ಮಾಡಿದರೆ ನಮ್ಮ ಭೂಮಿಗೆ ಉಪ್ಪಿನ ಬೇಲಿ ಕಟ್ಟಬಹುದು. ಕಡಲ ನೀರಲ್ಲಿ ಚಿನ್ನದ ಅಂಶವೂ ಇದೆಯಂತೆ. ಅದರಿಂದ ಚಿನ್ನ ತೆಗೆಯುವ ಪ್ರಯತ್ನವೂ ನಡೆದಿದೆ. ಆದರೆ ಆ ಪ್ರಯತ್ನಕ್ಕಾಗುವ ಖರ್ಚು, ಸಿಗುವ ಚಿನ್ನದ ಬೆಲೆಗಿಂತ ಜಾಸ್ತಿ. ಸಾವಿರಾರು ಮೈಲಿಗಟ್ಟಲೆ ಆಳದ ಕಡಲಡಿಯಲ್ಲಿ ಏನುಂಟು? ಏನಿಲ್ಲ? ಅಪಾರ ಸಂಪತ್ತನ್ನು ಹೊತ್ತುಕೊಂಡು ಮುಳುಗಿರುವ ಸಾವಿರಾರು ಹಡಗುಗಳು ಅಲ್ಲಿವೆ. ಕೋಟಿ ಕೋಟಿ ಬೆಲೆಬಾಳುವ ಚಿನ್ನ ಮತ್ತು ಬೆಳ್ಳಿಯ ಗಟ್ಟಿಗಳೂ ಅಲ್ಲಿವೆ. ಭೂಮಿಯ ಮೇಲಿರದಷ್ಟು ಅಮೂಲ್ಯ ಲೋಹದ ಅದುರುಗಳು ಕಡಲ ತಳದಲ್ಲಿದೆ. ಕಡಲಲ್ಲಿರುವ ಮುತ್ತಿನ ಚಿಪ್ಪಿನ ಪ್ರಾಣಿಗಳು ವರ್ಷಕ್ಕೆ ಮಣಗಟ್ಟಲೆ ಮುತ್ತು ನೀಡುತ್ತವಂತೆ. ಹವಳದ ಬೆಟ್ಟಗಳೇ ಅಲ್ಲಿವೆ. ಮತ್ತೇನು ಬೇಕು ಕಡಲಿಗೆ?

ಸಾವಿರಾರು ಜಾತಿಯ ಜೀವ ಸಂಪತ್ತು ಆ ಕಡಲಲ್ಲಿದೆ. ಮೀನ ಸಂಪತ್ತಲ್ಲದೆ ಲೆಕ್ಕವಿಲ್ಲದಷ್ಟು ಜಾತಿಯ ಪ್ರಾಣಿ ಜೀವಿಗಳಿವೆ. ಹಾಗೆಯೇ ಸಸ್ಯ ಜೀವಿಗಳಿವೆ. ಕೆಲವು ಸಮುದ್ರ ಸಸ್ಯಗಳು ನೂರು ಅಡಿ ಎತ್ತರವಿದೆ. ಸಮುದ್ರ ಪ್ರಾಣಿಗಳಿಗೆ ಅವು ಆಹಾರ ನೀಡುತ್ತವೆ. ಅಲ್ಲಿ ಹಸಿರು, ಕೆಂಪು, ನೀಲಿ ಬಣ್ಣಗಳ ಪಾಚಿ ಗಿಡಗಳಿವೆ. ಈ ಪಾಚಿ ಗಿಡಗಳೇ ಕೆಲವೊಮ್ಮೆ ಸಮುದ್ರಕ್ಕೆ ಬಣ್ಣ ಕೊಡುತ್ತದೆ. ಕೆಲವು ಜಾತಿಯ ಸಮುದ್ರದ ಕಳೆಗಳು ಉತ್ತಮ ಗೊಬ್ಬರ ಕೂಡಾ. ಕಡಲಲ್ಲಿ ಜೀವ ಸಂಪತ್ತು ಇರುವುದರಿಂದಲೇ ಪೆಟ್ರೋಲಿಯಂ ಇರುವುದು ಸಾಧ್ಯ. ಕಡಲಲ್ಲಿರುವ ಜೀವಸಂಪತ್ತು ಸತ್ತಾಗ, ಕಡಲ ತಳ ಸೇರಿಯೇ ಪೆಟ್ರೋಲಿಯಂ ಉತ್ಪನ್ನವಾಗುತ್ತೆ.

ಕಮಲುವಿಗೆ, ಕಡಲೊಳಗೆ ಏನಿದೆ ಎನ್ನುವುದು ಸ್ವಲ್ಪ ಮಟ್ಟಿಗೆ ಗೊತ್ತು. ಅದನ್ನು ಆಕೆಗೆ ಹೇಳಿದವರೂ ಗಣಪಯ್ಯನವರು. ಕಡಲ ಒಳಗೆ ನಮ್ಮ ಸುತ್ತ ಮುತ್ತಲಿರುವ ಎಲ್ಲವೂ ಇದೆ. ಬೆಟ್ಟ ಗುಡ್ಡ, ಮರ, ಬಳ್ಳಿ, ಪ್ರಾಣಿ, ಕಣಿವೆ, ಕಂದಕ ಹೀಗೆ ಎಲ್ಲವೂ ಇವೆ. ಹಿಂದೆ, ನೂರಾರು ಕೋಟಿ ವರ್ಷಗಳ ಕಾಲ ಮಳೆ ಸುರಿದು, ಹೆಪ್ಪುಗಟ್ಟಿದ ಹಿಮ ಕರಗಿ, ಭೂಮಿಯಲ್ಲಿರುವ ಗುಡ್ಡ ಪರ್ವತಗಳು ಅದರಲ್ಲಿ ಮುಳುಗಿದವು. ಸುರಿದ ಮಳೆ ಸಾಗರಕ್ಕೆ ಹರಿದು ಬರುವಾಗ ಬೆಟ್ಟ ಗುಡ್ಡಗಳಿಂದ ಕಲ್ಲು, ಮಣ್ಣು ಧೂಳನ್ನು ಎಳೆದು ತಂದಿತು. ಆ ಮಳೆಯ ಜೊತೆ ಬೀಸಿ ಬಂದ ಗಾಳಿಯೂ ಧೂಳು ಮರಳನ್ನು ತಂದು ಕಡಲಿಗೆ ಸೇರಿಸಿತು. ಲೆಕ್ಕವಿಲ್ಲದಷ್ಟು ಬಾನ ಬೆಳ್ಳಿಗಳು ಸುಟ್ಟು ಸಾಗರ ಸೇರಿದವು. ಇದು ಯುಗ ಯುಗಗಳಿಂದ ನಡೆದು ಬಂದ ಕಾರ್ಯ. ಇವೆಲ್ಲವೂ ಸೇರಿ ಕಡಲಡಿ ಮಡ್ಡಿ ಬೆಳೆಯಿತು. ಆ ಮಡ್ಡಿಯ ಮೇಲೆ ನೀರಿನ ಬಲ ಬಿತ್ತು. ಅದು ಗಟ್ಟಿಯಾಗಿ ಪದರವಾಯ್ತು. ಕೋಟಿ ಕೋಟಿ ವರ್ಷಗಳು ಉರುಳಿದಂತೆ ಮಡ್ಡಿಯ ಮೇಲೆ ಮಡ್ಡಿ ಬೆಳೆದು ಪದರದ ಮೇಲೆ ಪದರ ಬೆಳೆಯಿತು. ಈ ಪದರ ಲೆಕ್ಕವಿಲ್ಲದಷ್ಟು ಜೀವಿಗಳ ತವರು.

ಈ ಮಡ್ಡಿಯ ಪದರದಡಿ ಇರುವ ಭೂಮಿಯೂ ನಮ್ಮ ಭೂಮಿಯೇ. ಅಲ್ಲೂ ಭೂಮಿಯ ಮೇಲೆ ನಡೆವಂತೆ ಜ್ವಾಲಾಮುಖಿ ನಡೆಯುತ್ತದೆ. ಸಾಗರದ ತಳದಲ್ಲಿ ನೆಲ ಹೀಗೆ ಬೆಂಕಿಯುಂಡೆ ಉಗುಳುವುದು ಸಾಮಾನ್ಯ. ಇಂತಾ ಜ್ವಾಲಾಮುಖಿಗಳಿಂದ ಹಿಮಾಲಯದಷ್ಟು ಎತ್ತರದ ಪರ್ವತಗಳೇ ಹುಟ್ಟುತ್ತದೆ. ಕಡಲಡಿ ಸಾವಿರಾರು ಇಂತಾ ಪರ್ವತಗಳಿವೆ. ಈ ಪರ್ವತಗಳ ತುದಿಗಳು ಕಡಲ ಮೇಲಿಂದ ಸಾವಿರಾರು ಅಡಿ ಎತ್ತರದಲ್ಲಿ ಕಾಣಿಸುತ್ತದೆ. ಈ ತುದಿಗಳು ದ್ವೀಪವೆನಿಸುತ್ತವೆ. ಪರದೇಶದಲ್ಲಿ ಇಂತಾ ಹಲವು ದ್ವೀಪಗಳಿವೆ. ನಮ್ಮ ಎತ್ತರದ ಹಿಮಾಲಯ ಪರ್ವತವೂ ಹಿಂದೆ ಕಡಲಡಿ ಇದ್ದಿದ್ದು. ಅದು ಎದ್ದು ಮೆರೆದಿದ್ದು ಇತ್ತೀಚೆಗೆ ಮೂರು ಕೋಟಿ ವರ್ಷಗಳ ಹಿಂದೆ.

ಗಣಪಯ್ಯನವರು ಹೀಗೆ. ಬಾಯಿಬಿಟ್ಟರೆ ಹೇಳುತ್ತಲೇ ಹೋಗುತ್ತಾರೆ. ಕಡಲೊಳಗೆ ದೊಡ್ಡ ದೊಡ್ಡ ನದಿಗಳೇ ಇವೆ. ಅವುಗಳಲ್ಲಿ ಕೆಲವನ್ನು ಬಿಸಿನೀರ ಪ್ರವಾಹ ಎನ್ನುತ್ತಾರೆ. ಇನ್ನು

ಕೆಲವನ್ನು ತಣ್ಣೀರ ಪ್ರವಾಹ ಎನ್ನುತ್ತಾರೆ. ಈ ಪ್ರವಾಹಗಳು ನದಿಯ ರೂಪದಲ್ಲಿ ಕಡಲ ಒಳಗಡೆ ಹರಿಯುತ್ತಿರುತ್ತವೆ. ಅವುಗಳು ಎರಡು ಮೈಲಿ ಅಗಲವಿರಬಹುದು. ಕೆಲವು ಸಮುದ್ರದಡಿ ಹಿಮಪ್ರವಾಹವೂ ಇದೆ. ಬಿಸಿ ಪ್ರವಾಹ ಒಂದು ದಿಕ್ಕಿನಲ್ಲಿ ಹರಿದರೆ, ಅದರಡಿ ಹಿಮ ಪ್ರವಾಹ ವಿರುದ್ಧ ದಿಕ್ಕಿನಲ್ಲಿ ಹರಿಯುತ್ತದೆ. ಇದಕ್ಕೆಲ್ಲ ಕಾರಣ ಭೂಮಿಯ ಉಷ್ಣಶಕ್ತಿ. ಬಿಸಿ ನೀರು ವಿಸ್ತರಿಸಿ, ಹಗುರವಾಗಿ ಮೇಲೇರುತ್ತದೆ. ಹಿಮ ನೀರು ಅಥವ ತಣ್ಣೀರು ಭಾರವಾಗಿ ಕೆಳಗಿಳಿಯುತ್ತದೆ.

ಗಣಪಯ್ಯನವರು ಮತ್ತೂ ಹಲವು ಸಂಗತಿ ಹೇಳಿದ್ದರು. ಪರದೇಶದ ವೀರರು ಕಡಲಡಿಗೆ ಹೋಗಿ ಬಂದ ವಿಚಾರ ಅದರಲ್ಲಿ ಒಂದು. ಇತ್ತೀಚೆಗೆ ನಮ್ಮವರೂ ಕಡಲ ತಳಕ್ಕೆ ಹೋಗುತ್ತಿದ್ದಾರಂತೆ. ಬೆನ್ನಿಗೆ ಉಸಿರಗಾಳಿಯ ಯಂತ್ರಕಟ್ಟಿ ಕತ್ತಲ ರಾಜ್ಯಕ್ಕೆ ನುಗ್ಗುವುದು ಸುಲಭ ಸಂಗತಿಯಲ್ಲ. ಮೊಟ್ಟಮೊದಲಿಗೆ ಪರದೇಶದ ಒಬ್ಬ ಸಾಹಸಿ ಕಡಲತಳದಿಂದ ಮಡ್ಡಿ ತಂದು ಕೊಟ್ಟ. ಅದರಲ್ಲಿ ಜೀವಗಳಿವೆ ಎನ್ನುವುದನ್ನ ತೋರಿಸಿಕೊಟ್ಟ. ಕಡಲ ತಳದಲ್ಲಿ ಹಿಮಾಲಯ ಪರ್ವತವನ್ನು ಹುದುಗಿಸಬಲ್ಲಂತ ಆಳ ಕಣಿವೆ ಇದೆ ಎನ್ನುವುದನ್ನ ಪತ್ತೆ ಮಾಡಿದವ ಮತ್ತೊಬ್ಬ ವೀರ, ಅವನೂ ಪರದೇಶದವ.

ಕಡಲಿನ ಆಳ, ಉಬ್ಬು ತಗ್ಗು ಅಲ್ಲಿನ ಪ್ರಾಣಿಜಗತ್ತನ್ನು ಪತ್ತೆ ಮಾಡುವ ಸಲಕರಣೆಯನ್ನೂ ಪತ್ತೆ ಹಚ್ಚಿದ್ದಾರೆ. ಆ ಸಲಕರಣೆ ಪ್ರತಿಧ್ವನಿಯ ಮೂಲಕ ನಮಗೆ ಮಾಹಿತಿ ಕೊಡುತ್ತದೆ. ಅದನ್ನ ಪ್ರತಿಧ್ವನಿ ಮಾಪಕ ಎನ್ನುತ್ತಾರೆ. ಇತ್ತೀಚೆಗೆ ಬಂದಂತಾ ಜಲಾಂತರ ನೌಕೆಗಳು ಸಾಗರ ತಳವನ್ನು ಜಾಲಾಡಿಸುವಂತಾದ್ದು. ಅವು ಕಡಲ ತಳವನ್ನು ಬೆಳಗಬಲ್ಲದು. ಅಲ್ಲಿನ ಚಿತ್ರಗಳನ್ನು ತೆಗೆಯಬಲ್ಲವು. ಕಡಲ ತಳವನ್ನು ದೂರದರ್ಶನಲ್ಲಿ ತೋರಿಸಬಲ್ಲದು.

ಗಣಪಯ್ಯನವರ ಈ ಎಲ್ಲಾ ಮಾತುಗಳು ತನಿಯನಿಗೆ ಅರ್ಥವಾಗಿರಲಿಲ್ಲ. ಕೂತಲ್ಲಿಂದ ಆಕಳಿಸಿ ಎದ್ದಿದ್ದ. ಆದರೆ ಮಗಳು ವಾರಿಜಳಿಗೆ ತಿಳಿದಿದ್ದನ್ನ ಹೇಳಲು ಮರೆತಿರಲಿಲ್ಲ.

ಇದೀಗ ತನಿಯ ದೋಣಿಯಲ್ಲಿದ್ದ ಮೀನನ್ನು ಕಡಲ ದಡಕ್ಕೆ ಸುರಿದ. ತಟ್ಟನೆ ಆತನಿಗೆ ಕರಿಯ ನೆನಪಿಗೆ ಬಂದ. ತಂದ ಮೀನಲ್ಲಿ ಕರಿಯನಿಗೂ ಸಮಪಾಲು ಕೊಡಲು ತೀರ್ಮಾನಿಸಿದ. ಕಮಲುವನ್ನು ಕೂಗಿ ಕರೆದ. ಕಮಲ ಬಂದಳು - ಬುಟ್ಟಿ ತಂದಳು.

ಆಕೆಯ ಬುಟ್ಟಿಗೆ ಮೀನು ಸುರಿದ. ಕಮಲುವಿನ ಮುಖ ಗೆಲುವಾಯಿತು. ತನಿಯನ ಮುಖದಲ್ಲಿ ಬೆವರಿಳಿಯುತ್ತಿತ್ತು.

ತನಿಯ ದಣಿದಿದ್ದ. ಆತ ಕಡಲದಡದಿಂದ ಮೇಲೆದ್ದು ಬಂದು ತೆಂಗಿನ ಮರದಡಿ ಕೂತ. ಅಲ್ಲಿಗೆ ವಾರಿಜಳೂ ಬಂದಳು. ಆಕೆ ಕುತೂಹಲದಿಂದ ಕಡಲತ್ತ ನೋಡುತ್ತಿದ್ದಳು. ಕಡಲಲ್ಲಿ ಆಕೆಯ ಅಣ್ಣ ರಾಮು ಈಜುತ್ತಿದ್ದ. ತೆರೆಗಳು ಏರಿ ಬಂದಾಗ ದಡಕ್ಕೆ ಮುಖ ಮಾಡಿ ನಿಂತು ಮೇಲಕ್ಕೆ ಜಿಗಿಯುತ್ತಿದ್ದ. ತೆರೆಗಳ ಹಿಡಿತಕ್ಕೆ ತಾನು ಸಿಗುತ್ತಿಲ್ಲ ಎಂಬಂತೆ. ತೆರೆಗಳೂ ಆತನನ್ನು ಮೇಲಕ್ಕೆ ಎತ್ತುತ್ತಿದ್ದವು. ಆ ಸೊಬಗನ್ನ ವಾರಿಜ ನೋಡುತ್ತಿದ್ದಳು. ತನಿಯನೂ ಮಗನ ಈಜಾಟ, ತೆರೆಗಳ ಕುಣಿದಾಟವನ್ನು ನೋಡುತ್ತಿದ್ದ. ಹಾಗೆ ನೋಡುತ್ತಿದ್ದವನಿಗೆ ಗಣಪಯ್ಯವನರು ತೆರೆಗಳ ಆಟದ ಬಗ್ಗೆ ಹೇಳಿದ್ದ ಮಾತು ನೆನಪಿಗೆ ಬಂದಿತ್ತು.

ಪರದೇಶದಲ್ಲಿ ತೆರೆಗಳ ಜತೆ ಆಡುವ ಒಂದು ಆಟವೇ ಇದೆ. ಅದನ್ನು 'ಸರ್ಫಿಂಗ್' ಆಟ ಎನ್ನುತ್ತಾರೆ. ಹಲಗೆಯ ಮೇಲೇರಿ ನಿಂತು, ಕುಪ್ಪಳಿಸಿ ಬರುವ ತೆರೆಗಳ ಜತೆ ಸೆಣಸಾಡುತ್ತಾ, ಅವುಗಳನ್ನ ಮುರಿಯುತ್ತಾ ವಾಲುತ್ತಾ ಕಡಲತೀರಕ್ಕೆ ತಾಗುವುದೇ ಒಂದು ಆಟ. ಇತ್ತೀಚೆಗೆ ನಮ್ಮೂರಲ್ಲೂ ಈ ಆಟ ಶುರುವಾಗಿದೆಯಂತೆ - ಎಂದು ಗಣಪಯ್ಯನವರು ಹೇಳಿದ್ದರು.

ತನಿಯ ಮಗನ ಈಜಾಟವನ್ನು ನಗುತ್ತಾ ನೋಡುತ್ತಿದ್ದ. ಅಷ್ಟರಲ್ಲಿ ಹಿಂಬದಿಯ ಗಾಳಿತೋಪಿನಲ್ಲಿ ಮಾತಿನ ಸಂತೆ ಎದ್ದಿತ್ತು. ಮಾತಿನ ಗಲಾಟೆ ಕೇಳಿ ತನಿಯ ಹಿಂದಿರುಗಿ ನೋಡಿದ. ಪ್ರವಾಸಿ ತಂಡವೊಂದು ದಡದತ್ತ ಬರುತ್ತಿತ್ತು! ಕಡಲು ನೋಡಲು ಬಂದ ತಂಡದವರು.

ತಂಡದಲ್ಲಿದ್ದವರು ವಿಶಾಲ ಕಡಲನ್ನು ಕಂಡು ಸೋಜಿಗ, ಗಾಬರಿ ಸಂತಸದಿಂದ ಕುಣಿದಾಡಿದರು. ತಲೆಗೊಂದು ಕಾಲಿಗೊಂದು ಮಾತನಾಡಿ ಮಾತಿನ ಸಂತೆ ಎಬ್ಬಿಸಿದ್ದರು. ಆ ಪ್ರವಾಸಿ ತಂಡ ಈ ಕಡಲ ದಡಕ್ಕೆ ಬಂದಿದ್ದಲ್ಲ. ಅದು ದಾರಿತಪ್ಪಿ ಈ ಕಡಲದಡಕ್ಕೆ ಬಂದಿತ್ತು. ಅದು ಹೋಗಬೇಕಾಗಿದ್ದು ತುಸು ದೂರದಲ್ಲಿರುವ 'ಕಿನಾರ' ಕರಾವಳಿ ಪ್ರವಾಸಿ ತಾಣಕ್ಕೆ.

ತನಿಯನ ಮನೆ ಪಕ್ಕದಲ್ಲಿರುವ 'ಕಿನಾರ' ಪ್ರವಾಸಿ ತಾಣವಂತೂ ಹೆಚ್ಚಿನ ಪ್ರವಾಸಿಗಳನ್ನ ಸೆಳೆಯುತ್ತಿದೆ. ಪರದೇಶದವರೂ ಇಲ್ಲಿಗೆ ಬರುತ್ತಾರೆ. ಕಡಲ ದಡದಲ್ಲಿ ಬಿಸಿಲಿಗೆ ಮೈಯೊಡ್ಡಿ ಮಲಗುತ್ತಾರೆ. ತನಿಯ ಆಗಾಗ್ಗೆ ಈ ಪ್ರವಾಸಿ ಜಾಗಕ್ಕೆ ಹೋಗುತ್ತಿರುತ್ತಾನೆ. ಅಲ್ಲಿ ಪ್ರವಾಸಿಗಳ ಗುಂಪು ಕಂಡು ಆತನಿಗೆ ಬೆರಗು ಹುಟ್ಟುತ್ತದೆ. ಪ್ರವಾಸಿಗರು ಇಲ್ಲಿಗೆ ನದಿಯಂತೆ ಹರಿದು ಬರುವುದು ಆಶ್ಚರ್ಯ. ಇಂತಾ ಪ್ರವಾಸಿಗರಿಂದ ಸರಕಾರಕ್ಕೂ ಹಣದ ಹೊಳೆ ಹರಿದು ಬರುತ್ತದೆ - ಎಂದು ಗಣಪಯ್ಯನವರು ಆಗಾಗ್ಗೆ ಹೇಳುತ್ತಿರುತ್ತಾರೆ. ಅದನ್ನ ತನಿಯ ಪ್ರವಾಸಿಗರನ್ನ ಕಂಡಾಗಲೆಲ್ಲಾ ನೆನಪಿಸಿಕೊಳ್ಳುತ್ತಾನೆ. ಸರಕಾರ, ಕೆಲವೆಡೆ ಕಡಲದಂಡೆಯನ್ನು ಸಿರಿವಂತರಿಗೆ ಗುತ್ತಿಗೆ ಕೊಟ್ಟಿರುವ ವಿಚಾರವೂ ತನಿಯನಿಗೆ ತಿಳಿದಿದೆ. ಆ ಸಿರಿವಂತರು ಕಡಲ ದಂಡೆಗೆ ಸಾಕಷ್ಟು ಹಣಸುರಿದು ದಡವನ್ನ ಸೊಗಸುಗೊಳಿಸುತ್ತಾರೆ. ಉತ್ತಮ ಊಟ-ವಸತಿಯ ವ್ಯವಸ್ಥೆ ಮಾಡುತ್ತಾರೆ. ಕಡಲಲ್ಲಿ ವಿಹಾರದ ಅವಕಾಶ ಮಾಡಿಕೊಡುತ್ತಾರೆ. ಜೊತೆಗೆ ಪ್ರವಾಸಿಗರಿಂದ ಸಾಕಷ್ಟು ಹಣವನ್ನೂ ದೋಚುತ್ತಾರೆ.

ತನಿಯ ಪ್ರವಾಸಿ ತಂಡವನ್ನು ನೋಡುತ್ತಿದ್ದ. ವಾರಿಜ, ಕಡಲಿಂದ ಮೇಲೆದ್ದು ಬಂದ ಅಣ್ಣನನ್ನ ನೋಡುತ್ತಿದ್ದಳು. ಇದ್ದಕ್ಕಿದ್ದಂತೆ ಕಡಲದಡದ ಅಂಚಿಗೆ ಲಾರಿಯೊಂದು ಬಂದು ನಿಂತಿತ್ತು. ಅದು ಕಡಲ ದಡದಿಂದ ಮರಳು ಒಯ್ಯಲು ಬಂದಿತ್ತು. ತನಿಯನಿಗೆ ಆ ಲಾರಿಯನ್ನು ಕಂಡು ಸಿಟ್ಟು ನೆತ್ತಿಗೇರಿತ್ತು. ಕಡಲ ದಡದಿಂದ ಮರಳು ತೆಗೆದರೆ ದಡದಲ್ಲಿ ಹೊಂಡ ಬೀಳುತ್ತೆ. ಕಡಲ ದಡ ತಗ್ಗಾಗುತ್ತದೆ. ಕಡಲ ಕೊರೆತ ಹೆಚ್ಚಾಗುತ್ತದೆ. ಅದಕ್ಕೆ ತನಿಯನಿಗೆ ಸಿಟ್ಟು.

ಆ ಲಾರಿ ಗಾಜಿನ ಕಾರ್ಖಾನೆಯ ಒಡೆಯರಿಗೆ ಸೇರಿದ್ದು. ಗಾಜು ತಯಾರಿಕೆಗೆ ಮರಳು ಬೇಕೇ ಬೇಕಂತೆ. ಅದಕ್ಕಾಗಿ ಕಡಲತೀರವನ್ನು ಬಗೆಯುತ್ತಾರೆ. ತನಿಯನಿಗೆ ಕೋಪ ಬಂದರೆ ಕೇಳುವವರಾರು? ಬಡವನ ಕೋಪ ದವಡೆಗೆ ಮೂಲವಂತೆ. ಇಲ್ಲಿ ಮರಳು ತೆಗೆಯಬೇಡಿ ಎಂದರೆ ಸರಕಾರದ ಪರವಾನಿಗೆ ಇದೆ ಎನ್ನುತ್ತಾರೆ. ಈ ಬಗ್ಗೆ ಬೆಸ್ತರ ಜನಕ್ಕೂ, ಗಾಜಿನ ಉದ್ದಿಮೆಯ ಸಿರಿವಂತ ಜನಕ್ಕೂ ಭಾರೀ ಜಗಳ, ವಾದ - ವಿವಾದ ನಡೆದಿದೆ. ದೂರು ಸರಕಾರವನ್ನೂ ತಲುಪಿದೆ.

ಇದೀಗ ತನಿಯ ಮರಳಿನ ಲಾರಿಯನ್ನು ನೋಡುತ್ತಿದ್ದ. ಅಷ್ಟರಲ್ಲಿ ವಾರಿಜ ದಡದಲ್ಲಿದ್ದ ಕಪ್ಪೆ ಚಿಪ್ಪುಗಳನ್ನು ಆರಿಸುತ್ತಿದ್ದಳು. ಎಷ್ಟೊಂದು ಜಾತಿಯ ಕಪ್ಪೆ ಚಿಪ್ಪುಗಳು. ಬೇರೆ ಬೇರೆ ಬಣ್ಣದವು, ಬೇರೆ ಬೇರೆ ಗಾತ್ರದವು. ದೊಡ್ಡದು, ಚಿಕ್ಕದು, ಬರೀ ಪುಟ್ಟದು. ವಾರಿಜಳ ಕೊರಳಲ್ಲೂ ಒಂದು ಚಿಪ್ಪಿನ ಸರವಿತ್ತು. ಬಿಳಿಗೆ, ಕಪ್ಪು ಚುಕ್ಕೆ ಇದ್ದ ಚಿಪ್ಪಿನ ಸರವದು. ಅದು ಗಣಪಯ್ಯನವರು ರಾಮೇಶ್ವರಕ್ಕೆ ಪ್ರವಾಸ ಹೋದಾಗ ತಂದು ಕೊಟ್ಟಿದ್ದು. ಅಲ್ಲಿ ಬರೀ ಕಪ್ಪೆ ಚಿಪ್ಪುಗಳ ಆಭರಣಗಳನ್ನು ಮಾರುವ ಅಂಗಡಿಗಳ ಸಾಲೇ ಇದೆಯಂತೆ. ಗಣಪಯ್ಯನವರು ಅಲ್ಲಿಂದ ತಂದಿರುವ ಕಪ್ಪೆಚಿಪ್ಪಿನ ಮಣಿಸರಗಳನ್ನು, ಕೈಬಳೆ, ಕಿವಿಯೋಲೆಗಳನ್ನು ಊರಿನವರಿಗೆಲ್ಲಾ ಹಂಚಿದ್ದಾರೆ.

ವಾರಿಜ ತನ್ನ ಕೊರಳ ಸರವನ್ನು ಸವರಿಕೊಳ್ಳುತ್ತಾ ಕಪ್ಪೆ ಚಿಪ್ಪು ಆರಿಸುತ್ತಲೇ ಇದ್ದಳು. ಅಷ್ಟರಲ್ಲಿ ತನಿಯ ಮೇಲೆದ್ದ. ದೂರದಲ್ಲಿದ್ದ ಸರಸುವನ್ನ ಕರೆದ. ತನಿಯನ ಕರೆ ಕೇಳಿ ಕಮಲುವಿನ ಬುಟ್ಟಿಗೆ ಒಣ ಮೀನು ತುಂಬುತ್ತಿದ್ದ ಸರಸು ಬಂದಳು. ತನಿಯನತ್ತ ನಡೆಯುತ್ತಿದ್ದ ಸರಸುವನ್ನು ಕಮಲ ದಿಟ್ಟಿಸಿದಳು. 'ಕಮಲ ಇವತ್ತು ನಮ್ಮಲ್ಲೇ ಉಣ್ಣಲಿ' ಎಂದು ತನಿಯ ಸರಸುವಿನಲ್ಲಿ ಹೇಳಿದ. ಸರಸುವಿಗೆ ತನಿಯನ ಮಾತು ಹಿತವಾಯ್ತು. ಆಗಲೆಂದು ಒಪ್ಪಿದಳು - ಮಧ್ಯಾಹ್ನದ ಊಟ ಆಗಲೇ ಸಿದ್ಧವಾಗಿದೆ - ಎಂದು ಗಂಡನಲ್ಲಿ ಹೇಳಿದಳು. ಹಸಿದಿದ್ದ ತನಿಯ ಕಮಲುವನ್ನು ಊಟಕ್ಕೊಪ್ಪಿಸಲು ಆಕೆಯತ್ತ ನಡೆದಿದ್ದ. ಪಾದ ಸುಡುವಂತಿದ್ದ, ಕಾದ ಮರಳಲ್ಲಿ ನಡೆದಾಗ ಗೆಳೆಯ ಕರಿಯ ನೆನಪಿಗೆ ಬಂದಿದ್ದ. ಕರಿಯನಿಗಾಗಿ ಮರುಗಿದ ತನಿಯ.





ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದ್ದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು